|| ಶ್ರೀಜಗದ್ಗುರು ಪಂಚಾಚಾರ್ಯೇಭ್ಯೋ ನಮಃ ||

ವಿಶ್ವನಾಥಗ್ರಂಥಮಾಲಾ

ದ್ವಿತೀಯಪುಷ್ಪ—೨

# ಮಾನವಧರ್ಮ

ಭಾಷಣಕಾರರು ಮತ್ತು ಪ್ರಕಾಶಕರು :

ಶ್ರೀ|| ಷ|| ಬ್ರ|| ಮುರುಗೇಂದ್ರಶಿವಾಚಾರ್ಯಸ್ವಾಮಿಗಳು

ಕೊಣ್ಣೂರು ಹಿರೇಮಠ

...ಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು

1954

ಬೆಲೆ: ೧ ರೂ.

॥ ಶ್ರೀ ೧೦೦೮ ಜಗದ್ಗುರು ವಿಶ್ವಾರಾಧ್ಯೋ ವಿಜಯ ತೇತರಾಮ್ ॥



ನಮಸ್ತಸ್ಮೈ ಮಹೇಶಾಯ ಸೃಷ್ಟಿಸ್ಥಿತ್ಯಂತಕಾರಿಣೆ ।
ಯಸ್ಯಾನುಗ್ರಹತೋಲೋಕೇ ಮುಕ್ತಿಂಗಚ್ಛಂತಿಮಾನವಾಃ ॥

ವಿಶ್ವನಾಥಗ್ರಂಥಮಾಲಾ

ದ್ವಿತೀಯ ಪುಷ್ಪ—೨

# ಮಾನವಧರ್ಮ

ಭಾಷಣಕಾರರು ಮತ್ತು ಪ್ರಕಾಶಕರು :

ಶ್ರೀ॥ ಷ॥ ಬ್ರ॥ ಮುರುಗೇಂದ್ರಶಿವಾಚಾರ್ಯಸ್ವಾಮಿಗಳು
ಕೊಣ್ಣೂರು ಹಿರೇಮಠ

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು
1954
ಬೆಲೆ: ೧ ರೂ.

ಪ್ರಥಮ ಮುದ್ರಣ ಪ್ರತಿ ೧೦೦೦







ಈ ಪುಸ್ತಕ ದೊರೆಯುವ ಸ್ಥಳ—

**ಕೆ. ಜಿ. ಹಿರೇಮಠ**

**ಮು|| ಪೋ|| ಕೊಣ್ಣೂರು, ವ್ಹಾಯ—ನರಗುಂದ**

**ಜಿ|| ಧಾರವಾಡ**

# ಪೀಠಿಕೆ

**ಧರ್ಮವ ರಕ್ಷಿಪ ಮನುಜರಾ ।**
**ಧರ್ಮವೆ ಪೋಷಿಪುದು ನೋಡೈ ಸದಾ ಜಗದೊಳ್ ॥**
**ಧರ್ಮವನು ನಾಶಮಾಡುವ ।**
**ಕರ್ಮಿಯನಾ ಧರ್ಮವೆ ಹತವ ಮಾಡದೆ ಬಿಡದು ॥೧॥**

ಧರ್ಮವು ಪ್ರತಿ ಪ್ರಾಣಿ ಪದಾರ್ಥಗಳ ಒಂದು ಅಂತರಿಕ ಗುಣವು ; ಪ್ರಾಣಿಗಳ ಜೀವನ ಸುಖದ ನೈಸರ್ಗಿಕ ವಿಧಿಯೆನ್ನಬಹುದು. ಅಹಿಂಸಾದಿ ವ್ರತಗಳೂ, ಸದಾರೋಗ್ಯದ ನೇಮಗಳೂ, ಸದ್ವ್ಯವಹಾರ ರೀತಿಗಳೂ, ವಿಷಯೋಪಭೋಗಕ್ರಮಗಳೂ, ತ್ಯಾಗಭೋಗಗಳ ರೀತಿಗಳೂ ಇವೆಲ್ಲವು ಧರ್ಮಾಂಗಗಳಾಗಿವೆ.

ದೇಶದ ಜನಾಂಗಕ್ಕೆ, ಜನಾಂಗಗಳ ಜೀವನಕ್ಕೆ ಪೋಷಕವೂ, ಉದ್ಧಾರಕವೂ, ಆದ ನಿಯಮಗಳೇ ಧಾರ್ಮಿಕ ನಿಯಮಗಳು. ಧರ್ಮವೇತ್ತರು ಧರ್ಮವು ಲೋಕಾಧಾರವೆಂದೂ, ಅದು ಜೀವನದ ಜೀವಾಳವೆಂದೂ ಅರಿತಿದ್ದಾರೆ. ಯಾವ ರಾಷ್ಟ್ರವೇ ಆಗಲಿ, ಯಾವ ಜನಾಂಗವೇ ಆಗಲಿ, ಧರ್ಮರಹಿತವಾಗಿ ವರ್ತಿಸುತ್ತ ಬಂದದ್ದಾದರೆ, ಆ ರಾಷ್ಟ್ರ ಆ ಜನಾಂಗಗಳ ಜೀವನವು ಕಾಲಾಂತರದಲ್ಲಿ ನಾಶವನ್ನು ಹೊಂದುತ್ತ ಹೋಗತಕ್ಕದ್ದಾಗಿದೆ. ಧರ್ಮವನ್ನು ಬಿಟ್ಟು ಮಿಕ್ಕ ಗುಣಗಳನ್ನು ಪಡೆದ ಮಾನವನು ಜೀವನಾಧಾರವಾದ ಆಹಾರಸಾಮಗ್ರಿಯನ್ನೇ ಬಿಟ್ಟು, ಮಿಕ್ಕ ಕರಿತುರಗಾಯುಧಾದಿ ಸಮಸ್ತ ಪರಿವಾರದೊಡನೆ ಬೇಂಟೆಗೆ ಕಾಡನ್ನು ಹೊಕ್ಕು, ಹಸಿವಿನಿಂದ ಬೆಂದು ಬೆಂಡಾಗಿ ದುಃಖಪಡುವ ಮಹಾರಾಜನಂತೆ ದುಃಖಕ್ಕೀಡಾಗುವನು. ಯಾರ ಆತ್ಮದಲ್ಲಿ ಧರ್ಮವೆಂಬ ಗುಣವು ಹುಟ್ಟುವದೋ, ಅವರು ಸುವಾಸನೆಯುಳ್ಳ ಪುಷ್ಪದಂತೆ ದೇವಮಾನ್ಯರಾಗುವರು.

ಧರ್ಮ ಈ ಶಬ್ದವು ಆರ್ಯಭಾಷೆಯಲ್ಲಿ ಅನೇಕಾರ್ಥ ಉಳ್ಳದ್ದಾಗಿದೆ. ವೇದಧರ್ಮ, ದೇಶಧರ್ಮ, ರಾಜಧರ್ಮ, ಸೃಷ್ಟಿಧರ್ಮ, ವನಸ್ಪತಿಧರ್ಮ ಇತ್ಯಾದಿ ಅನಂತ ಶಬ್ದಗಳ ಅಂತ್ಯದಲ್ಲಿ ಇದ್ದ ಧರ್ಮ ಶಬ್ದವು ಬೇರೆ ಬೇರೆ ಅರ್ಥವನ್ನು ಕೊಡುವುದಾಗಿದೆ. ದೇಶ ಧರ್ಮ ಇದರಲ್ಲಿಯ ಧರ್ಮ ಶಬ್ದವು ದೇಶಪದ್ಧತಿಯನ್ನು; ವನಸ್ಪತಿಧರ್ಮ ಇದರಲ್ಲಿಯ ಧರ್ಮಶಬ್ದವು ವನಸ್ಪತಿ ಗುಣವನ್ನು; ರಾಜಧರ್ಮ ಇಲ್ಲಿಯ ಧರ್ಮ ಶಬ್ದವು ರಾಜನೀತಿಯನ್ನು; ಸೃಷ್ಟಿಧರ್ಮ ಇಲ್ಲಿಯ ಧರ್ಮ ಶಬ್ದವು ಸೃಷ್ಟಿಸ್ವಭಾವವನ್ನು; ಹೀಗೆ ಅನಂತ ಶಬ್ದಗಳ ಅಂತ್ಯದಲ್ಲಿದ್ದ ಧರ್ಮ ಶಬ್ದವು ಅನಂತಾರ್ಥಗಳನ್ನು ಕೊಡುವುದಾಗಿದೆ.

ಧರ್ಮದಲ್ಲಿ ಸಾಮಾನ್ಯಧರ್ಮವೆಂದೂ, ವಿಶೇಷ ಧರ್ಮವೆಂದೂ ಎರಡು ವಿಧ ಧರ್ಮಗಳುಂಟು. ಸಾಮಾನ್ಯ ಧರ್ಮಗಳಿಗೆ ಜಾತಿ-ಕುಲ-ಗೋತ್ರಾದಿ ನಿಯಮಗಳೇನೂ ಇಲ್ಲವು. ಸಾಮಾನ್ಯವಾಗಿ ಒಬ್ಬರಿಗೊಬ್ಬರು ಸಹಾಯವನ್ನು ಮಾಡುವದು. ಹಸಿದವರಿಗೆ ಅನ್ನವನ್ನು ಕೊಡುವದು. ಕಳ್ಳತನ ಮಾಡದಿರುವುದು. ತಂದೆ-ತಾಯಿ, ಗುರು-ಹಿರಿಯರನ್ನು ಪೀಡಿಸದಿರುವುದು ಇಂಥವುಗಳೆಲ್ಲವೂ ಬ್ರಾಹ್ಮಣಾದಿಯಾಗಿ ಅಂತ್ಯಜಪರ್ಯಂತ ವಿರುವ ಸಕಲ ಮಾನವರಿಗೂ ಸಂಬಂಧಪಟ್ಟ ಧರ್ಮಗಳಾಗಿರುತ್ತವೆ. ಇಂಥ ಸಾಮಾನ್ಯ ಧರ್ಮಗಳನ್ನು ಕಾಪಾಡಿಕೊಳ್ಳದಿದ್ದವನು ನರಾಕೃತಿಯನ್ನು ಧರಿಸಿದ ಪಿಶಾಚಿಯೆಂದೇ ಭಾವಿಸಬೇಕಾಗುವದು. ಈ ಧರ್ಮಗಳನ್ನು ಕಾಪಾಡಿಕೊಳ್ಳುವುದೇ ಆಸ್ತಿಕತ್ವದ ಲಕ್ಷಣವಾಗಿದೆ.

ಇನ್ನು ವಿಶೇಷ ಧರ್ಮವೆಂದರೆ:—"ವೇದೇನ ಪ್ರಯೋಜನಮುದ್ದಿಶ್ಯ ವಿಧೀಯಮಾನೋಽರ್ಥೋ ಧರ್ಮಃ" ಒಂದೊಂದು ಫಲವನ್ನುದ್ದೇಶಿಸಿ ವೇದದಲ್ಲಿ ಹೇಳಲ್ಪಡುವ ನಿಯಮಗಳಿಗೆ ಧರ್ಮವೆಂದು ಹೇಳುವರು. ಈ ವಿಶೇಷ ಧರ್ಮಗಳು ಆಯಾಯ ಫಲಾನುಸಾರವಾಗಿ ಅನಂತ

ವಿಧಗಳಾಗಿರುತ್ತವೆ. ಆದರೆ ಮುಖ್ಯವಾಗಿ ಜೀವಭಾವವನ್ನು ನೀಗಿ ದೇವಭಾವವನ್ನು ಪಡೆಯುವುದೇ ಸರ್ವೋತ್ಕೃಷ್ಟವಾದ ಅಥವಾ ನಿಜವಾದ ಮಾನವಧರ್ಮ!

ನಾವು ಪಂಡಿತರೂ ಅಲ್ಲ; ವ್ಯಾಖ್ಯಾನಪಟುಗಳೂ ಅಲ್ಲ; ಆದರೂ ತಾ|| ೯-೯-೧೯೫೦ ನೇ ಇಸ್ವಿಯಲ್ಲಿ ಧಾರವಾಡ ಜಿಲ್ಲಾ ರೋಣ ತಾಲೂಕ ಪೈಕಿ ಮೆಣಶಿಗಿ ಗ್ರಾಮದ ಹಿರೇಮಠದ ಶ್ರೀ ಲಿಂಗ ಬಸವೇಶ್ವರ ರಥೋತ್ಸವ ಕಾಲಕ್ಕೆ, ಅಲ್ಲಿಯ ಸದ್ಭಕ್ತಮಂಡಳಿಯ ಆಮಂತ್ರಣದ ಪ್ರಕಾರ ದಯಮಾಡಿಸಿದಾಗ್ಗೆ, ಸಾರ್ವಜನಿಕ ಸಭೆಯಲ್ಲಿ "ಮಾನವಧರ್ಮ" ಈ ವಿಷಯದ ಬಗ್ಗೆ ಒಳ್ಳೇ ಸ್ಫೂರ್ತಿಯಿಂದ ಭಾಷಣವು ಮಾಡಲ್ಪಟ್ಟಿತು. ಶ್ರೀ ಗುರುಪ್ರಸಾದ ವಾಣಿಯಿಂದ ಹೊರ ಹೊಮ್ಮಿದ ಈ ದಿವ್ಯಭಾಷಣದ ಸಂಕಲನವೇ ಈ ಪುಟ್ಟಗ್ರಂಥವಾಗಿದೆ.

ಈ ಚಿಕ್ಕ ಹೊತ್ತಿಗೆಯನ್ನು ಪರಿಶೋಧಿಸಿ ಸದಭಿಪ್ರಾಯವನ್ನು ಬರೆದು ಕಳುಹಿಸಿ ಪ್ರೋತ್ಸಾಹವಿತ್ತ, ಸಾಹಿತ್ಯಾಚಾರ್ಯ, ವೇದಾಂತ ಶಾಸ್ತ್ರಿ, ಮೀಮಾಂಸಾ, ಸಾಹಿತ್ಯವಿಶಾರದ, ಕವಿರಾಜ ಇತ್ಯಾದಿ ಪದವೀ ವಿಭೂಷಿತರೂ, 'ಭಾರತೀಯ ಸಿದ್ಧಾಂತ' ಮಾಸಪತ್ರಿಕೆಯ ಸಂಪಾದಕರೂ, ದಯಾಳು ಹೃದಯರೂ, ರೌಡಕುಂದಿ ಬೃಹನ್ಮಠದ ಚರಪಟ್ಟಾಧ್ಯಕ್ಷರೂ ಆದ ಷ|| ಬ್ರ|| ಪಂ|| ಶ್ರೀ|| ಶಿವಯೋಗಿಶಿವಾ ಚಾರ್ಯ ಮಹಾಸ್ವಾಮಿಗಳವರಿಗೆ ಉಪಕೃತನಾಗಿರುವೆನು.

ಸಾತ್ವಿಕರೂ, ಶಾಂತಸ್ವಭಾವದವರೂ, ನಿಗರ್ವಿಗಳೂ, ಧಾರ ವಾಡ ಕರ್ನಾಟಕ ಕಾಲೇಜದ ಪ್ರೊಫೆಸರರೂ ಆದ ಶ್ರೀಯುತ ಎಸ್. ಎಸ್. ಮಾಳವಾಡ ಎಂ.ಎ., ರವರು ತಮ್ಮ ಅನಂತಕಾರ್ಯ ಗಳನ್ನು ಬದಿಗಿಟ್ಟು, ಸಕಾಲಕ್ಕೆ ಈ ಪುಟ್ಟ ಹೊತ್ತಿಗೆಗೆ ಮುನ್ನುಡಿ ಯನ್ನು ಬರೆದು ಕಳುಹಿಸಿದ್ದಾರೆ.

ಶ್ರೀಗಳವರು ತಮ್ಮ ಅಭಿಪ್ರಾಯದಲ್ಲಿ:—ಓದಿ ಮುಗಿಸಿದಾಗ ಪುಸ್ತಕ ಇನ್ನಿಷ್ಟು ದೊಡ್ಡದಾಗಿದ್ದರೆ ಚೆನ್ನಾಗಿತ್ತು ಎನಿಸುತ್ತದೆ; ಅಂತ

ಸೂಚಿಸಿದ್ದಾರೆ. ಆದುದರಿಂದ ಈ ಭಾಷಣದ ಸಂಕಲನದ ಜೊತೆಗೆ ವೀರಶೈವ ದರ್ಶನದಲ್ಲಿ ಜ್ಞಾನಕರ್ಮಸಮುಚ್ಚಯವಾದ, ನವವಿಧಭಕ್ತಿ, ಪಾತಿವ್ರತ್ಯ ಈ ಮೂರು ವಿಷಯಗಳನ್ನೂ ಮತ್ತು ಕೆಲವು ಸದ್ಭಕ್ತರ ಅಪೇಕ್ಷಾನುಸಾರ ನಿತ್ಯ ಪಾರಾಯಣಕ್ಕಾಗಿ ಶ್ರೀ ಜಗದ್ಗುರು ವಿಶ್ವಾರಾಧ್ಯಾಷ್ಟೋತ್ತರ ಶತನಾಮಾವಲಿ, ಶ್ರೀ ವಿಶ್ವಾರಾಧ್ಯಾಷ್ಟಕ, ಕೆಲವು ಸ್ತೋತ್ರಗಳನ್ನೂ ಸೇರಿಸಲಾಗಿದೆ.

ದುಡ್ಡಿನ ಕಡೆಗೆ ಲಕ್ಷ್ಯಗೊಡದೆ ಧರ್ಮದ ಕಡೆಗೆ ದೃಷ್ಟಿಯನ್ನಿಟ್ಟು ಪ್ರತಿಯೊಬ್ಬ ಮಾನವನು ದಯವಿಟ್ಟು ಈ ಪುಸ್ತಕವನ್ನು ತರಿಸಿಕೊಂಡು ನಿತ್ಯ ಪಠಿಸುತ್ತ ಇದರಲ್ಲಿಯ ಅಮೋಘ ವಿಷಯಗಳನ್ನು ತಿಳಿದುಕೊಂಡು ಅದರಂತೆ ನಡೆದು, ಉತ್ತಮವಾದ ಮಾನವಜನ್ಮವನ್ನು ಸಾರ್ಥಕಪಡಿಸಿಕೊಳ್ಳುವಿರೆಂದು ಪೂರ್ಣ ನಂಬಿದ್ದೇವೆ.

ಶ್ರೀ ಮಾಳವಾಡರವರಿಗೂ ಮತ್ತು ಈ ಚಿಕ್ಕಕಾವ್ಯದ ಪ್ರಿಂಟಿಗೆ ಧನಸಹಾಯ ಮಾಡಿದ ಭಕ್ತಮಾಹೇಶ್ವರರಿಗೂ, ಶ್ರೀ ಪರಮಾತ್ಮನು ಆಯುರಾರೋಗ್ಯ ಭಾಗ್ಯಾದಿಗಳನ್ನಿತ್ತು ರಕ್ಷಿಸಲಿ.

|| ಜಯಭುವನೇಶ್ವರಿ ||

ಶ್ರೀಶಕೆ ೧೮೭೬ ಜಯಸಂವತ್ಸರ,
ಜೇ. ಬ॥ ೯ (ತಾ॥ ೨೫-೬-೧೯೫೪)
ಶುಕ್ರವಾರ

ತಮ್ಮ
ಶ್ರೀ ಪಟ್ಟದಸ್ವಾಮಿಗಳು.

# ಮುನ್ನುಡಿ



ಕೊಣ್ಣೂರು ಹಿರೇಮಠದ ಪಟ್ಟಾಧ್ಯಕ್ಷರಾದ ಶ್ರೀ|| ಷ|| ಬ್ರ|| ಪಂ|| ಮುರುಗೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳನ್ನು ಬಾಲ್ಯದಿಂದ ನಿಕಟವಾಗಿ ಅರಿತುಕೊಂಡ ಆತ್ಮೀಯತೆ, ಶ್ರೀಗಳ ವಿದ್ಯಾಸಕ್ತಿಗಾಗಿ ಬಹುಕಾಲದಿಂದ ನಾನು ವಹಿಸಿರುವ ಆದರಭಾವ, ಇವುಗಳಿಂದಾಗಿ ನಾನೀಗ ಎರಡುಮಾತು ಹೇಳಬೇಕಾದುದು ಪ್ರಸ್ತುತವಾಗಿದೆ. ಸಕಲ ಜೀವಿಗಳ ಕಲ್ಯಾಣವನ್ನು ಸಾಧಿಸುವ, ಅಖಿಲ ಮಾನವತೆಯ ಧರ್ಮವನ್ನು ಬಿತ್ತರಿಸುವ ಬರೆಹ ಬಂದನಿತೂ ಒಳ್ಳೆಯದೆಂದು ನಾನು ಭಾವಿಸುತ್ತೇನೆ. ಈ ದೃಷ್ಟಿಯಿಂದಲೂ ಈ ಹೊತ್ತಿಗೆಯು ನನಗೆ ಆತ್ಮೀಯವಾಗಿದೆ. ನಮ್ಮ ಮಠಾಧೀಶರು ಸಾರಸ್ವತ ಪ್ರಪಂಚಕ್ಕೆ ಕಾಣಿಕೆ ಸಲ್ಲಿಸುವ ಕಾರ್ಯದಲ್ಲಿ ಮುಂದಾಗುತ್ತಿರುವುದು ನಾಡಿನ ಶುಭೋದಯದ ಗುರುತೂ ಅಹುದು.

ಮಾತನ್ನೇನೋ ಎಲ್ಲರೂ ಆಡಬಲ್ಲರು. ಆದರೆ ಆಡಿದ ಮಾತು ಮತ್ತೊಬ್ಬರ ಮನದಲ್ಲಿ ಮೂಡಿ ಮೊಳೆಯುವದರಲ್ಲಿ ಅದರ ಸಫಲತೆಯಿದೆ. ಮಾತನಾಡುವವರ ಹೃದಯ, ಬುದ್ಧಿ, ಮನ, ಪ್ರಾಣಗಳೊಳಗೆಲ್ಲ ಹರಿದಾಡುವ ಸತ್ತ್ವದಿಂದ, ಆಡಿದ ಮಾತಿಗೆ ಹುಲುಸುಂಟಾಗುತ್ತದೆ; ಬೆಲೆ ಬರುತ್ತದೆ.

"ಮಾನವಧರ್ಮ"ದ ವಿಷಯವನ್ನು ಪ್ರಸ್ತಾಪಿಸಿದವರು ಅಧಿಕಾರ ಸಂಪನ್ನರು, ಸತ್ತ್ವಶಾಲಿಗಳು, ತಪೋಬಲವನ್ನೇ ಆಧಾರವಾಗಿ ಉಳ್ಳವರು. ಲೋಕಕಲ್ಯಾಣ ದೃಷ್ಟಿಯಿಂದ ಅವರು ಮಂಡಿಸುವ ಮಾತುಗಳಿಗೆಲ್ಲ ಬೆಲೆಯಿದೆ. ಇಂಥ ಮಹಾನುಭಾವರ ಉಕ್ತಿಗಳನ್ನು ಶುದ್ಧ ಸಾಹಿತ್ಯದ ಒರೆಗೆ ಹಚ್ಚಬೇಕಾಗಿಲ್ಲ. ನೈತಿಕ ಅಧಃಪಾತದ,

ಹೀನಮನೋವೃತ್ತಿಯು, ಧಾರ್ಮಿಕ ಅಧೋಗತಿಯು ಹಾಗೂ ಅಸಹಿಷ್ಣುತೆಯು ಇಂದಿನ ದಿನಮಾನಗಳಲ್ಲಿ, ಈ ಎಲ್ಲದಿಸೆಗಳಲ್ಲಿಯೂ ಅಧಿಕಾರಯುಕ್ತವಾಣಿಯಿಂದ ಉದಾತ್ತಧರ್ಮಬೋಧಮಾಡಬಲ್ಲವರ ಉಪದೇಶಗಳು ಅವೆಷ್ಟೇ ಮೊತ್ತದಲ್ಲಿ ಬಂದರೂ, ಅದಾವ ಸ್ವರೂಪದಲ್ಲಿ ಬಂದರೂ ಜನತೆಗೆ ಗ್ರಾಹ್ಯವೆಂದು ಒಪ್ಪಬೇಕಾಗುತ್ತದೆ.

ಮಾನವನ ಅಲ್ಪವೃತ್ತಿಯು ಮಹತ್ತೆಂಬುದು ಮೂಡಿ ಬರುವದರ ಬೀಜವೆಂದೂ, ಅವನ ಸ್ವಾರ್ಥಭಾವವು ಪರಮಾರ್ಥಕ್ಕೆ ಪ್ರಥಮ ಸೋಪಾನವೆಂದೂ, ಅವನ ಆತ್ಮಪ್ರೇಮವು ವಿಶ್ವಾತ್ಮಸಾಕ್ಷಾತ್ಕಾರದ ಎಳೆಯ ಅಂಕುರವೆಂದೂ ಗ್ರಹಿಸಿದ್ದಾದರೆ, ಅರ್ಥಾತ್ ಮಾನವನ ದೌರ್ಬಲ್ಯವೆಲ್ಲ ಅವನ ಅಮೋಘಸಾಮರ್ಥ್ಯದ ಶೈಶವಾವಸ್ಥೆಯೆಂದು ತಿಳಿಯಲು ನಾವು ಕಲಿತರೆ, ಜೀವನವು ಆಶಾಪೂರ್ಣವಷ್ಟೇ ಅಲ್ಲ, ಸುಂದರವೂ, ಶಿವವೂ ಆಗಿ ಪರಿಣಮಿಸುವದು. ಹೀಗೆಂದಾಕ್ಷಣಕ್ಕೆ, ಮಾನವನ ದೌರ್ಬಲ್ಯವೇ ದೊಡ್ಡದೆಂದು ಅಪಾರ್ಥಮಾಡಿಕೊಳ್ಳಕೂಡದು. ಈ ದೌರ್ಬಲ್ಯದ ತಲೆಮೆಟ್ಟಿಯೇ ಮಾನವ ಮೇಲೇರಬೇಕಾಗಿದೆ.

ಶ್ರೀಗಳ ವಚನದಿಂದ, ಉದಾತ್ತ ಭಾವನೆಗಳು ಜನತೆಯಲ್ಲಿ ಮೂಡಲೆಂದೂ, ತನ್ಮೂಲಕ ಜನಜೀವನವು ಧರ್ಮನೀತಿಗಳ ನೆಲೆಗಟ್ಟಿನ ಮೇಲೆ ಭದ್ರವಾಗಿ ಹಬ್ಬಿಕೊಳ್ಳಲೆಂದೂ ಹಾರೈಸುತ್ತೇನೆ.

ಸ. ಸ. ಮಾಳವಾಡ.

# ಸದಭಿಪ್ರಾಯ

ಶ್ರೋತ್ರಿಯ ಬ್ರಹ್ಮನಿಷ್ಠರೂ, ಶಿವಾದ್ವೈತಸಿದ್ಧಾಂತಾನುಭಾವಿಗಳೂ, ವಿದ್ವತ್ಪ್ರೇಮಿಗಳೂ, ಉದಾರಿಗಳೂ, ಕೊಣ್ಣೂರ ಬೃಹನ್ಮಠದ ಪಟ್ಟಾಧ್ಯಕ್ಷರೂ ಆದ ಶ್ರೀ|| ಷ|| ಬ್ರ|| ಪಂ|| ಮುರುಗೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ತಮ್ಮ ಭಾಷಣದ ಸಂಕಲನರೂಪವಾದ ಈ 'ಮಾನವಧರ್ಮ' ಎಂಬ ಹೊತ್ತಿಗೆಯನ್ನು ನನ್ನೆಡೆಗೆ ಪರಿಶೋಧನೆಗಾಗಿ ಕಳುಹಿಸಿ ಇದರ ಬಗೆಗೆ ನನ್ನ ಅಭಿಪ್ರಾಯವನ್ನು ಕೇಳಿದ್ದಾರೆ. ಅನುಭವಿಗಳ ಹೊತ್ತಿಗೆಗೆ ಅಭಿಪ್ರಾಯಕೊಡುವುದು ಬಹು ಕಠಿನವಾದ ಕೆಲಸ. ಪ್ರಸ್ತುತ ಗ್ರಂಥವು ಶ್ರೀಗಳವರ ಅನುಭವದ ಸಾರವಾಗಿದೆ. ಜೊತ್ತೆ ಎಲ್ಲ ಅನುಭಾವಿಗಳ ಅನುಭವದ ಸಾರವೂ ಇದೆ. ಇದಕ್ಕೆ 'ಮಾನವಧರ್ಮ' ಎಂದು ಹೆಸರಿಸಿರುವುದು ಅನ್ವರ್ಥಕವಾಗಿದೆ. ಸಮಸ್ತ ಮಾನವರಿಗೆ ಅನ್ವಯಿಸುವ ತತ್ತ್ವಗಳು ಇದರಲ್ಲಿವೆ. ಧರ್ಮಶಾಸ್ತ್ರವಾಕ್ಯಗಳನ್ನೂ, ಮಹಾತ್ಮರ ನುಡಿಗಳನ್ನೂ, ಕತೆಗಳನ್ನೂ ಸೇರಿಸಿರುವುದರಿಂದ ಈ ಪುಸ್ತಕವು ಹೃದಯಂಗಮವಾಗಿದೆ. ಓದಿ ಮುಗಿಸಿದಾಗ ಪುಸ್ತಕ ಇನ್ನಿಷ್ಟು ದೊಡ್ಡದಾಗಿದ್ದರೆ ಚೆನ್ನಾಗಿತ್ತು ಎನಿಸುತ್ತದೆ. ಲೇಖನಶೈಲಿ ಅಷ್ಟು ಹಳೆಯದೂ ಅಲ್ಲ, ಹೊಸದೂ ಅಲ್ಲ; ಹಳಬಹೊಸಬರಿಬ್ಬರಿಗೂ ಬುದ್ಧಿಗಲಿಸುವಂತಹುದಾಗಿದೆ. ಈಗಾಗಲೇ ಶ್ರೀಗಳು 'ಸುನೀತಿಸುಧೆ' ಎಂಬ ಪುಸ್ತಕವನ್ನು ಬರೆದು ಲೋಕೋಪಕಾರ ಮಾಡಿದ್ದಾರೆ.

ಸಾಹಿತ್ಯಸುಂದರಿ ಚಿರವಿನೂತನೆ ಅವಳಿಗೆ ತನ್ನ ಸಿರಿಮುಡಿಯ ಸಿಂಗಾರಕ್ಕಾಗಿ ದಿನಾಲೂ ವಿವಿಧಭಾವ-ಸುಗಂಧಭರಿತಗಳಾದ ನವನವ ಕೃತಿ ಕುಸುಮಗಳು ಬೇಕು. ಅವಿಲ್ಲದೆ ಅವಳ ಸಿರಿಮುಡಿ ಶೋಭಿಸದು. ಅವಳಿಗೂ ಸಂತಸವಾಗದು. ಇಂತಹ ಘನವೆತ್ತ ಕಾಮಿನಿಯುವಳು !

ಅವಳಿಗೆ ಹಳೆಯ ಸಾಹಿತ್ಯವೂ ಬೇಕು, ಹೊಸದೂ ಬೇಕು. ಮತ್ತೆ ಆವೆರಡರ ಮಧ್ಯಸ್ಥಸಾಹಿತ್ಯವೂ ಲೌಕಿಕ ಪಾರಮಾರ್ಥಿಕ ಮುಂತಾಗಿ ಯಾವೊಂದು ಸಾಹಿತ್ಯದ ಅಭಾವವಾದರೂ ಅವಳ ಶೋಭೆಗೆ ಕುಂದು. ಅವಳಿಗೆ ಈ ಕುಂದು ಉಂಟಾಗದಂತೆ ನೋಡಿಕೊಳ್ಳುವ ಹೊಣೆ ಆಯಾ ಕಾಲದ ಸಾಹಿತಿಗಳದು. ಸಾಹಿತ್ಯವೆಂದರೆ ' ಕಾಳಿದಾಸನಂತಹ ಕವಿಗಳು ಕಟ್ಟಿದ ಕಾವ್ಯಗಳು ಮಾತ್ರ' ಎಂಬ ಭಾವನೆ ಕೆಲವರಲ್ಲಿ ಇದ್ದಂತಿದೆ. ಇದು ಸರಿಯಲ್ಲ. ಅರ್ಥವೈಶಾಲ್ಯವನ್ನೊಳಗೊಂಡ ' ಸಾಹಿತ್ಯ' ಸಂಜ್ಞೆಯನ್ನು ಕಾವ್ಯಗಳ ಮಟ್ಟಿಗೇ ಸೀಮಿತಗೊಳಿಸುವುದು ಜಾಣ್ಮೆಯಲ್ಲ, ಯುಕ್ತವೂ ಅಲ್ಲ. ವೇದಾಗಮ ಪುರಾಣಗಳಿಂದ ಹಿಡಿದು ಆಧುನಿಕ ಕವಿಸಾಹಿತಿಗಳ ಕೃತಿಗಳೆಲ್ಲವೂ ಸಾಹಿತ್ಯವೆ. ಪೂಜ್ಯ ಶ್ರೀಗಳವರ ಈ ಪುಸ್ತಕವು ಉತ್ತಮಸಾಹಿತ್ಯದಲ್ಲಿ ಸೇರಲು ತಕ್ಕುದಾಗಿದೆ. ಈ ಪುಸ್ತಕದಿಂದ ಶ್ರೀಗಳು ಸಾಹಿತ್ಯದೇವಿಗೆ ಅಮೂಲ್ಯವಾದ ಸೇವೆ ಸಲ್ಲಿಸಿದ್ದಾರೆ. ಅವರಲ್ಲೇನು ಇವರಲ್ಲೇನು ? ಎಂದು ಮನ ಬಂದಂತೆ ವರ್ತಿಸಿ ಜೀವನ್ಮೃತವಾಗತೊಡಗಿರುವ ಸಮಾಜವಲ್ಲಿ ಸದಾಚಾರ ಸದ್ವಿಚಾರಗಳೆಂಬ ಸಂಜೀವಿನಿ ತುಂಬಲು ತುಂಬಾ ಯತ್ನಿಸಿದ್ದಾರೆ. ಎಲ್ಲ ಮಾನವರೂ ಈ ಪುಸ್ತಕವನ್ನು ಓದಿ ನೋಡಲೇಬೇಕು. ಓದಿದವರು ನಿಜಬಾಳು ಬಾಳುವರು, ಹೀಗೆಂದು ನನ್ನ ವಿಶ್ವಾಸ.

ಶ್ರೀಗಳ ಈ ಆದರ್ಶವನ್ನು ಮುಂದಿಟ್ಟುಕೊಂಡು ಇತರ ಸ್ವಾಮಿಗಳವರೂ ಸಮಾಜ ಸೇವಾಕಾರ್ಯದಲ್ಲಿ ಮುಂದುವರಿಯಲೇಲೆಂದು ಆಶಿಸುತ್ತೇನೆ.

ರೌಡಕುಂದಿ ಬೃಹನ್ಮಠೀಯ

**ಸಿ. ಶಿವಾಚಾರ್ಯ,**

ಸಾಹಿತ್ಯಾಚಾರ್ಯ, ವೇದಾಂತಶಾಸ್ತ್ರೀ, ಮೀಮಾಂಸಾ,

ಸಾಹಿತ್ಯವಿಶಾರದ, ಕವಿರಾಜ.



ಕೊಣ್ಣೂರು ಬೃಹನ್ಮಠದ ಪಟ್ಟಾಧ್ಯಕ್ಷರಾದ
ಶ್ರೀ॥ ಷ॥ ಬ್ರ॥ ಮುರುಗೇಂದ್ರ ಶಿವಾಚಾರ್ಯ
ಸ್ವಾಮಿಗಳವರು

ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು

# ಮಾನವಧರ್ಮ*

ಪಂಚಾನನತನೂದ್ಭೂತಾನ್ ಪಂಚಾಕ್ಷರಮನೂಪಮಾನ್ ।
ಪಂಚಸೂತ್ರ ಕೃತೋವಂದೇ ಪಂಚಾಚಾರ್ಯಾನ್ ಜಗದ್ಗುರೂನ್ ॥

ಸಭಿಕ ಮಹಾಶಯರೆ, ಮತ್ತು ಸಭ್ಯಗೃಹಸ್ಥರೆ, ಇವತ್ತಿನ ದಿವಸ ನಮ್ಮ ಅಲ್ಪಮತಿಗೆ ತಿಳಿದಮಟ್ಟಿಗೆ ಮಾನವಧರ್ಮ ಈ ವಿಷಯದ ಬಗ್ಗೆ ನಾಲ್ಕಾರು ಮಾತುಗಳನ್ನು ಹೇಳುತ್ತೇವೆ. ಸರ್ವರೂ ಶಾಂತಚಿತ್ತದಿಂದ ಕೇಳಿ ಧನ್ಯರಾಗಬೇಕೆಂದು ಹಾರೈಸುತ್ತೇವೆ.

## ನೀತಿ

ಬಹಳ ಹಣವನ್ನು ವೆಚ್ಚಮಾಡಿ ಸುಂದರವಾಗಿ ಕಟ್ಟಿದ ಇಮಾರತಿಯು ಬಹುಕಾಲ ಉಳಿಯಬೇಕಾದರೆ, ಮತ್ತು ಅದು ಫಲಕಾರಿಯಾಗಬೇಕಾದರೆ, ಫೌಂಡೇಶನ್ (ತಳಹದಿ) ಹೇಗೆ ಮುಖ್ಯವೋ ಹಾಗೆ ರಾಷ್ಟ್ರದ ಜನಾಂಗವು ಸುಖಶಾಂತಿಯಿಂದ ಬಾಳಿ, ಗೌರವ ಪ್ರತಿಷ್ಠೆಗಳನ್ನು ಹೊಂದಬೇಕಾದರೆ ನೀತಿಯೇ ಮೂಲವಾಗಿರುವುದು. ತಳಹದಿಯಿಲ್ಲದೆ ಇಮಾರತಿಯನ್ನು ಕಟ್ಟಿದ್ದಾದರೆ ಅದು ವ್ಯರ್ಥವಾಗುವುದಲ್ಲದೆ, ಕಟ್ಟಿದ ಶ್ರಮಕ್ಕೂ ಫಲವಿಲ್ಲದಂತಾಗುವದು. ಅದರಂತೆ ಮಾನವನು ಬೇಕಾದಷ್ಟು ಪಾಂಡಿತ್ಯವನ್ನು ಪಡೆದಿದ್ದರೂ ನೀತಿಯೊಂದಿಲ್ಲದಿದ್ದರೆ, ಅವನ ಪಾಂಡಿತ್ಯವು ನಿರರ್ಥಕವಾಗುವದಲ್ಲದೆ ಕಲಿತ ಶ್ರಮಕ್ಕೂ ಫಲವಿಲ್ಲದಂತಾಗಿ, ಜಗತ್ತಿನಲ್ಲಿ ಮಾನ್ಯತೆಯನ್ನೂ, ಗೌರವ ಪ್ರತಿಷ್ಠೆಯನ್ನೂ ಹೊಂದಲಾರನು. ಪ್ರತಿಯೊಂದು ಮತದ ಸ್ಥಾಪನಾಚಾರ್ಯರಾಗಲಿ, ಸಾಧು-ಸತ್ಪುರುಷರಾಗಲಿ, ಕೈಲಾದಮಟ್ಟಿಗೆ ಎರಡ

---

* ಧಾರವಾಡ ಜಿಲ್ಲಾ ರೋಣ ತಾಲೂಕ ಪೈಕಿ ಮೆಣಶಿಗಿ ಗ್ರಾಮದ ಹಿರೇಮಠದಲ್ಲಿ ಶ್ರೀಲಿಂಗಬಸವೇಶ್ವರ ರಥೋತ್ಸವ ಕಾಲಕ್ಕೆ ತಾ॥ ೯-೯-೬೫ರಂ ರಲ್ಲಿ ಸಾರ್ವಜನಿಕ ಸಭೆಯಲ್ಲಿ ಮಾಡಿದ ಭಾಷಣದ ಸಂಕಲನ.

ನೆಯವರಿಗೆ ಒಳ್ಳೆಯದನ್ನು ಮಾಡಬೇಕೆಂದು ಹೇಳಿರುವರೇ ಹೊರತು ಕಷ್ಟನಷ್ಟಗಳನ್ನೂ, ಹಿಂಸೆಯನ್ನೂ ಮಾಡಬೇಕೆಂದು ಹೇಳಿರುವುದಿಲ್ಲ.

ಬೌದ್ಧರಿಗೆ ಗುರುವಾದ ಗೌತಮಬುದ್ಧನು "ಕೆಟ್ಟದ್ದನು ಮಾಡಬೇಡ ಒಳ್ಳೆಯದನ್ನೇ ಮಾಡು" ಎಂದು ಹೇಳಿದ್ದಾನೆ. ಕ್ರಿಶ್ಚಿಯನ್ನರಿಗೆ ಗುರುವಾದ ಏಸುಕ್ರಿಸ್ತನು "ನಿನ್ನಂತೆಯೇ ನಿನ್ನ ನೆರೆಯವರನ್ನು ಪ್ರೀತಿಸು." ಎಂದು ಹೇಳಿದ್ದಾನೆ. ಮಹಮ್ಮದೀಯರ ಗುರುವಾದ ಮಹಮ್ಮದ್ ಪೈಗಂಬರ್ "ಮನುಷ್ಯವರ್ಗಕ್ಕೆ ಯಾವನಿಂದ ಒಳ್ಳೆಯದಾಗುತ್ತದೋ ಅವನೇ ಉತ್ತಮ ಮನುಷ್ಯ" ಎಂಬುದಾಗಿಹೇಳಿದ್ದಾನೆ. ಪಾರ್ಸಿಯವರ ಗುರುವಾದ ಮಹಾತ್ಮಾ ಜೋರೋಸ್ಟ್ರಿಯನ್ನನು "ನೀನು ಬೆಂಕಿಯಂತೆ ಪರಿಶುದ್ಧನಾಗಿರು, ಅಜ್ಞಾನ, ಮೂಢಭಕ್ತಿ, ವಂಚನೆ, ಅನ್ಯಾಯ ಇವುಗಳನ್ನು ಓಡಿಸು. ಪ್ರೀತಿಯು ಮತ್ತು ಮನಸ್ಸಿನ ಪರಿಶುದ್ಧತೆಯು ಮೋಕ್ಷವನ್ನು ಹೊಂದಿಸುವವು." ಎಂಬುದಾಗಿ ಹೇಳಿದ್ದಾನೆ. ಸರ್ವಜ್ಞಕವಿಯು :—

"ಕಚ್ಚೆ ಕೈ ಬಾಯಿಗಳು ಇಚ್ಛೆಯಲಿ ಇರುತಿರೆ
ಅಚ್ಯುತನಪ್ಪ ಅಜನಪ್ಪ ಲೋಕದಲಿ
ನಿಶ್ಚಿಂತನಪ್ಪ ಸರ್ವಜ್ಞ ॥"

ಗುಹ್ಯ, ಕೈ, ಬಾಯಿ ಈ ಮೂರೂ ತನ್ನ ಅಧೀನದಲ್ಲಿಟ್ಟುಕೊಳ್ಳಬೇಕು. ಅರ್ಥಾತ್ ವ್ಯಭಿಚಾರಮಾಡದೆ, ಎರಡನೆಯವರ ಪದಾರ್ಥಗಳನ್ನು ಕದಿಯದೆ, ಎರಡನೆಯವರ ಮನಸ್ಸು ನೋಯುವಂತೆ ಮಾತನಾಡದೆ ಇದ್ದರೆ ಅವನೇ ಜಗತ್ತಿನಲ್ಲಿ ಶಿವನು, ಬ್ರಹ್ಮನು, ಚಿಂತೆಯಿಲ್ಲದವನು ಎಂದು ಹೇಳಿದ್ದಾನೆ. ವೀರಶೈವಮತೋದ್ಧಾರಕರಾದ ಶ್ರೀ ಬಸವಣ್ಣನವರು :—ದೇವನೊಬ್ಬ, ನಾಮ ಹಲವು, ದಯವಿಲ್ಲದ ಧರ್ಮವಾವುದಯ್ಯಾ? ಅಯ್ಯಾ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ. ನೊಂದನೋವ ನೋಯದವರೆತ್ತಬಲ್ಲರು? ದೇವರು ಒಬ್ಬನೇ ಹೊರತು ಅನೇಕ ದೇವರುಗಳಿಲ್ಲ. ಆ ಒಬ್ಬ ದೇವರನ್ನೇ ಅನೇಕ ಮತೀಯರು

ಅನೇಕ ಹೆಸರುಗಳಿಂದ ಕರೆಯುತ್ತಾರೆ. ದುಃಖಪಡತಕ್ಕ ಪ್ರಾಣಿಗಳನ್ನು ಕಂಡು ಅವರಲ್ಲಿ ಕನಿಕರಗೊಂಡು ಅವರ ದುಃಖವನ್ನು ನಿವಾರಣೆ ಮಾಡಿದರೆ ಅದು ನಿಜವಾದ ಧರ್ಮವು. ಒಬ್ಬನ ಮನಸ್ಸು ಸಂತೋಷ ವಾಗುವಂತೆ ಮಾತನಾಡಿದರೆ ಅದರಿಂದ ಪುಣ್ಯವುಂಟಾಗಿ ನಮಗೆ ಸುಖ ವಾಗುತ್ತದೆ. ಒಬ್ಬನ ಮನಸ್ಸು ನೋಯುವಂತೆ ಮಾತನಾಡಿದರೆ ಅದರಿಂದ ಪಾಪವುಂಟಾಗಿ ನಮಗೆ ದುಃಖವುಂಟಾಗುತ್ತದೆ. ಮನಸ್ಸು ನೊಂದವರಿಗೆ ನೋವು ಗೊತ್ತಾಗುತ್ತದೆಯೇ ಹೊರತು ಮನಸ್ಸು ನೋಯಿಸಿದವರಿಗೆ ಆ ನೋವು ಗೊತ್ತಾಗುವುದಿಲ್ಲ.

> ಕಳಬೇಡ, ಕೊಲಬೇಡ ಹುಸಿಯನುಡಿಯಲುಬೇಡ, ಮು
> ನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬ
> ಣ್ಣಿಸಬೇಡ, ಇದಿರು ಹಳಿಯಲುಬೇಡ, ಇದೇ ಅಂತ
> ರಂಗಶುದ್ಧಿ, ಇದೇ ಬಹಿರಂಗಶುದ್ಧಿ, ಇದೇ ನಮ್ಮ ಕೂಡ
> ಲ ಸಂಗಮ ದೇವನ ನೊಲಿಸುವಪರಿ.

ಎರಡನೆಯವರ ಪದಾರ್ಥಗಳನ್ನು ಕದಿಯಬೇಡ, ಯಾವ ಪ್ರಾಣಿ ಯನ್ನೂ ಕೊಲ್ಲಬೇಡ, ಸುಳ್ಳನ್ನಾಡಬೇಡ, ಕೋಪವನ್ನು ಮಾಡಬೇಡ, ಇತರರನ್ನು ನೋಡಿ ಅಸಹ್ಯಪಡಬೇಡ, ನಿನ್ನನ್ನು ನೀನು ಹೊಗಳಿ ಕೊಳ್ಳಬೇಡ, ಯಾರನ್ನೂ ದೂಷಿಸಬೇಡ, ಇದರಿಂದ ನಿನ್ನ ಅಂತ ರಂಗವು ಮತ್ತು ಬಹಿರಂಗವು ಶುದ್ಧಿಯಾಗಿ ಶ್ರೀ ಕೂಡಲಸಂಗಮ ನಾಥನ ಅನುಗ್ರಹದಿಂದ ನಿನಗೆ ಮೋಕ್ಷವು ಉಂಟಾಗುತ್ತದೆ. ಈಪ್ರಕಾರ ಹೇಳಿದ್ದಾರೆ. ಇದೇ ರೀತಿಯಾಗಿ ಉಳಿದ ಮತೀಯರ ಗುರುಗಳೂ ಸಾಧು-ಸತ್ಪುರುಷರೂ ಬೇರೆ ಬೇರೆ ತರದಿಂದ ಹೇಳಿದ್ದಾರೆ. ಮತಗಳು ಭಿನ್ನಭಿನ್ನವಾದರೂ ಪ್ರತಿಯೊಂದು ಮತದ ರೀತಿನೀತಿಗಳು ಮಾತ್ರ ಒಂದೇವಿಧವಾಗಿರುವುವು. ಅಂತೇ “ ಜಾತಿಗೆ ಭೇದವಿದ್ದರೂ ನೀತಿಗೆ ಭೇದವಿಲ್ಲ ” ಎಂಬ ವಾಕ್ಯವು ಜಗತ್ಪ್ರಸಿದ್ಧವಾಗಿದೆ. ಆದ್ದರಿಂದ ನೀತಿಯು ಮಾನವ ಜನ್ಮಧಾರಿಗಳೆಲ್ಲರಿಗೂ ಅವಶ್ಯ ಬೇಕೇಬೇಕು.

# ಸರ್ವಪ್ರಾಣಿಗಳಲ್ಲಿ ಮಾನವಜನ್ಮ ಶ್ರೇಷ್ಠವೇಕೆ ?

"ಯೊ ಬ್ರಹ್ಮಾಣಂ ವಿದಧಾತಿಪೂರ್ವಂ ಯೊ ವೈ ವೇದಾಂಶ್ಚ
ಪ್ರಹಿಣೋತಿ ತಸ್ಮೈ ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ"

ಇತ್ಯಾದಿ ಶ್ರುತಿಪ್ರಮಾಣಾನುಸಾರವಾಗಿ ಆದಿಯಲ್ಲಿ ಶಿವನು ಚತುರ್ಮುಖಬ್ರಹ್ಮನನ್ನು ನಿರ್ಮಿಸಿ, ಅವನಿಗೆ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದವೆಂಬ ನಾಲ್ಕು ವೇದಗಳನ್ನು ಉಪದೇಶಿಸಿದನು. ಬ್ರಹ್ಮನು ಶಿವನ ಆಜ್ಞಾನುಸಾರವಾಗಿ ಪಂಚಭೂತಾತ್ಮಕವಾದ ಜಗತ್ತನ್ನು ಸೃಷ್ಟಿಸಿ, ಅದರಲ್ಲಿ ಅಂಡಜ, ಉದ್ಭಿಜ್ಜ, ಸ್ವೇದಜ, ಜರಾಯುಜ ಎಂಬ ಚತುರ್ವಿಧ ಪ್ರಾಣಿಗಳನ್ನು ನಿರ್ಮಿಸಿದನು. ಅಂಡಜಗಳೆಂದರೆ–ಪಕ್ಷಿಸರ್ಪಾದಿಗಳು. ಉದ್ಭಿಜ್ಜಗಳೆಂದರೆ–ಮರ, ಗಿಡ, ಬಳ್ಳಿ ಮುಂತಾದವುಗಳು. ಸ್ವೇದಜಗಳೆಂದರೆ–ಕ್ರಿಮಿ, ಕೀಟ ಮೊದಲಾದವುಗಳು. ಜರಾಯುಜಗಳೆಂದರೆ–ಮನುಷ್ಯ, ಮೃಗ ಮೊದಲಾದವುಗಳು. ಇವುಗಳೊಳಗೆ ಉದ್ಭಿಜ್ಜಗಳೇ ಸ್ಥಾವರಗಳೆಂದೂ, ಉಳಿದವುಗಳೇ ಜಂಗಮಗಳೆಂದೂ ಕರೆಯಲ್ಪಡುವವು. ಸ್ಥಾವರಗಳೆಂದರೆ–ಚರಿಸದೆ ಒಂದೇಕಡೆ ಇರತಕ್ಕವುಗಳೆಂದರ್ಥವು. ಜಂಗಮಗಳೆಂದರೆ–ಸಂಚರಿಸತಕ್ಕವುಗಳೆಂದರ್ಥವು. ಸ್ಥಾವರಗಳಿಗಿಂತಲೂ ಜಂಗಮ ಪ್ರಾಣಿಗಳೇ ಶ್ರೇಷ್ಠಗಳು. ಯಾಕಂದರೆ ಜಂಗಮಪ್ರಾಣಿಗಳಿಗೆ ಪ್ರಜ್ಞೆಯುಂಟು. ಜಂಗಮಪ್ರಾಣಿಗಳಲ್ಲಿ—

ಕ್ರಿಮಿಕೀಟಪತಂಗೇಭ್ಯಃ ಪಶವಃ ಪ್ರಜ್ಞಯಾಧಿಕಾಃ ।
ಪಶುಭ್ಯೋಽಪಿ ನರಾಶ್ಶ್ರೇಷ್ಠಾ ಸ್ತೇಷುಶ್ರೇಷ್ಠಾ ದ್ವಿಜಾತಯಃ ॥

ಎಂಬ ಶಂಕರಸಂಹಿತಾ ವಚನಪ್ರಮಾಣದಿಂದ ಪ್ರಜ್ಞೆಯಲ್ಲಿ ಕ್ರಿಮಿಗಳಿಗಿಂತ ನೊಣ ಮುಂತಾದ ಕೀಟಗಳೂ, ಅವುಗಳಿಗಿಂತ ಪಕ್ಷಿಗಳೂ, ಅವುಗಳಿಗಿಂತ ಪಶುಗಳೂ, ಅವುಗಳಿಗಿಂತ ಮನುಷ್ಯರೂ ಶ್ರೇಷ್ಠರು.

ಈ ವಿಧವಾದ ಮನುಷ್ಯರಲ್ಲಿ ಪ್ರಕೃತ್ಯನುಸಾರವಾಗಿ ವೃತ್ತಿಭೇದದಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕುವರ್ಣಗಳುಂಟಾದವು. ಇದೇ ವಿಷಯವು—

ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ ।
ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಂ॥

ಗುಣಕರ್ಮವಿಭಾಗದಿಂದ ಎಂದರೆ ಸತ್ವ, ರಜ, ತಮ ಎಂಬ ಮೂರು ಗುಣಗಳನ್ನು ಮತ್ತು ಆಯಾಯ ಗುಣಗಳಿಗೆ ತಕ್ಕ ಕರ್ಮಗಳನ್ನು ನಿಮಿತ್ತ ಮಾಡಿಕೊಂಡು ನಾಲ್ಕು ವರ್ಣಗಳನ್ನು ಭಗವಂತನು ಸೃಷ್ಟಿ ಮಾಡಿರುತ್ತಾನೆಂದು ಭಗವದ್ಗೀತೆಯಲ್ಲಿಯೂ ಸಹ ಹೇಳಲ್ಪಟ್ಟಿದೆ. ಅವರೊಳಗೆ ಬ್ರಾಹ್ಮಣನೇ ಪ್ರಜ್ಞೆಯಲ್ಲಿ ಅಧಿಕನಾದುದರಿಂದ ಬ್ರಹ್ಮನು ಬ್ರಾಹ್ಮಣವರ್ಣಕ್ಕೆ ವೇದಾಧಿಕಾರವನ್ನೂ, ಗುರುತ್ವವನ್ನೂ ಕೊಟ್ಟನು. ಆದಕಾರಣವೇ "ವರ್ಣಾನಾಂ ಬ್ರಾಹ್ಮಣೋ ಗುರುಃ" ಎಂಬ ಶಾಸ್ತ್ರ ವುಂಟಾಯಿತು. ಸಮಸ್ತ ಪ್ರಾಣಿಗಳಿಗೂ ಜನನ ಮರಣಗಳೂ, ಸುಖ ದುಃಖಗಳೂ ಸಾಮಾನ್ಯವಾಗಿದ್ದಾಗ್ಯೂ ಎಂಭತ್ತುನಾಲ್ಕುಲಕ್ಷ ಜೀವ ರಾಶಿಗಳಲ್ಲಿ ಮಾನವಜನ್ಮವೇ ಶ್ರೇಷ್ಠವೆಂದು ಶಾಸ್ತ್ರವು ಸಾರುತ್ತದೆ. ಮಾನವನಿಗೆ ಇಷ್ಟು ಶ್ರೇಷ್ಠತ್ವ ಯಾಕೆ ಬಂತು ಇದರ ಬಗ್ಗೆ ವಿಚಾರ ಮಾಡಿದರೆ ಒಬ್ಬ ಕವಿಯು—

ಆಹಾರ ನಿದ್ರಾ ಭಯ ಮೈಥುನಾನಿ ।
ಸಾಮಾನ್ಯಮೇತ ತ್ಪಶುಭಿರ್ನರಾಣಾಂ ॥
ಜ್ಞಾನಂ ಹಿ ತೇಷಾ ಮಧಿಕಂ ವಿಭಾತಿ ।
ಜ್ಞಾನೇನಹೀನಃ ಪಶುಭಿಸ್ಸಮಾನಃ ॥

ಆಹಾರ, ನಿದ್ರಾ, ಸ್ತ್ರೀಭೋಗ ಇವು ಪಶುಗಳಿಗೂ ಬೇಕು; ಮನುಷ್ಯನಿಗೂ ಬೇಕು. ಅಂಜಿಕೆ ಪಶುಗಳಿಗೂ ಅದೆ; ಮನುಷ್ಯನಿಗೂ ಅದೆ. ಅಂದ ಬಳಿಕ ಪಶುಗಳಿಗೂ, ಮನುಷ್ಯನಿಗೂ ಏನೂ ವ್ಯತ್ಯಾಸ ವಿಲ್ಲ. ಇದು ಒಳ್ಳೆಯದು, ಇದು ಕೆಟ್ಟದ್ದು, ಇದು ನೀತಿ, ಇದು

ಅನೀತಿ, ಇದು ಧರ್ಮ, ಇದು ಅಧರ್ಮ, ಇದು ನ್ಯಾಯ, ಇದು ಅನ್ಯಾಯ, ಹೀಗೆ ವಿಂಗಡಿಸತಕ್ಕ ಬುದ್ಧಿ ಅಥವಾ ಜ್ಞಾನ ಮನುಷ್ಯನಿಗೆ ಆದೆಯೇ ಹೊರತು ಪಶುಗಳಿಗಿಲ್ಲ. ಆದ್ದರಿಂದ ಮಾನವ ಜನ್ಮವು ಇಷ್ಟು ಶ್ರೇಷ್ಠತ್ವವನ್ನು ಹೊಂದಿದೆ. ದೇವರು ನಮ್ಮೆಲ್ಲರಿಗೆ ಇಂಥ ಅಮೂಲ್ಯವಾದ ಜ್ಞಾನವೆಂಬ ರತ್ನವನ್ನು ಅನುಗ್ರಹಿಸಿದ್ದರೂ ಅದನ್ನು ನಾವು ಸರಿಯಾದ ಮಾರ್ಗದಲ್ಲಿ ಉಪಯೋಗಮಾಡದೆ, ದುರುಪಯೋಗ ಮಾಡಿದಲ್ಲಿ ಆ ಪಶುಗಳಿಗೂ, ನಮಗೂ ಏನೂ ಹೆಚ್ಚು ಕಡಿಮೆ ಇಲ್ಲ. ಅವು ನಾಲ್ಕುಕಾಲಿನ ಪಶುಗಳಾದರೆ ನಮಗೆ ಎರಡು ಕಾಲಿನ ನರಪಶು ಅನ್ನಲಿಕ್ಕೆ ಅಡ್ಡಿಯಿಲ್ಲವೆಂದು ಕವಿಯ ಅಭಿಪ್ರಾಯವಾಗಿರುವುದು. “ದುರ್ಲಭಂ ಮಾನುಷಂ ಜನ್ಮ” ಎಂಬ ಶಾಸ್ತ್ರೋಕ್ತಿಯಂತೆ ಉತ್ತಮವಾದ ಈ ಮಾನವಜನ್ಮವನ್ನು ಕೋತಿಯ ಕೈಗೆ ಸಿಕ್ಕ ಮಾಣಿಕ್ಯದಂತೆ ನಿರರ್ಥಕಗೊಳಿಸದೆ, ಸಾರ್ಥಕ ಪಡಿಸಿಕೊಳ್ಳುವುದೇ ಮಾನವಜನ್ಮದ ಮುಖ್ಯ ಉದ್ದೇಶವಾಗಿರುವುದು.

ಮನುಷ್ಯರಲ್ಲಿ ಉತ್ತಮ, ಮಧ್ಯಮ, ಅಧಮ, ಅಧಮಾಧಮ ಹೀಗೆ ನಾಲ್ಕುಪ್ರಕಾರದವರಿರುವರೆಂದು ಹೇಳಬಹುದು. ನಾನು ಯಾರು? ಏತಕ್ಕಾಗಿ ಹುಟ್ಟಿದೆನು? ನನ್ನ ಕರ್ತವ್ಯವೇನು? ದೇಹವಿಯೋಗಾನಂತರ ಏನಾಗುವದು? ಇವೇ ಮೊದಲಾದ ವಿಚಾರಗಳನ್ನು ಮಾಡುತ್ತ ಧರ್ಮದಿಂದ ನಡೆಯುವವನೇ ಉತ್ತಮನು. ಮೋಕ್ಷವಿಚಾರವಿಲ್ಲದಿದ್ದರೂ ತನ್ನ ಶಕ್ತ್ಯಾನುಸಾರ ದಾನ-ಧರ್ಮ ಪರೋಪಕಾರ ಮಾಡುತ್ತ ನ್ಯಾಯಮಾರ್ಗದಿಂದ ನಡೆಯುವವನೇ ಮಧ್ಯಮನು. ದಾನ-ಧರ್ಮ ಪರೋಪಕಾರ ಮಾಡದ ಸ್ವಕಾರ್ಯ ದುರಂಧರನೇ ಅಧಮನು. ಪರಹಿಂಸೆಯನ್ನು ಮಾಡಿ ಹೊಟ್ಟೆಯನ್ನು ತುಂಬಿಕೊಳ್ಳುವವನೇ ಅಧಮಾಧಮನು. ಇವರಲ್ಲಿ ಉತ್ತಮಪುರುಷನೇ ಪಾರಮಾರ್ಥಿಕನೆನಿಸುವನು. ಮಧ್ಯಮನೇ ಲೌಕಿಕನೆನಿಸುವನು. ಅಧ

ಮನೇ ಪಾಷಂಡನೆನಿಸುವನು. ಅಧಮಾಧಮನೇ ಪಾಪಿಯೆನಿಸುವನು. ಉತ್ತಮಪುರುಷನೆನಿಸಿಕೊಂಡು ಬದುಕಿ ಬಾಳಿ ದೇಹವನ್ನು ಬಿಡುವುದೇ ಮನುಷ್ಯತ್ವದ ಫಲವಾಗಿದೆ. ಪ್ರತಿಯೊಂದು ಮತದ ಗುರಿಯೂ ಇದೆ.

ಪ್ರತಿಯೊಬ್ಬ ಮಾನವನಿಗೂ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳು ಬೇಕೇ ಬೇಕು.

ಧರ್ಮವೆಂದರೆ–ಪುಣ್ಯಪಾಪವಿಧಿ. ಅರ್ಥವೆಂದರೆ–ಧನ, ಧಾನ್ಯ, ವಸ್ತ್ರ, ಒಡವೆ ಮುಂತಾದವುಗಳು. ಕಾಮವೆಂದರೆ–ಸ್ತ್ರೀಸುಖ, ಮೋಕ್ಷವೆಂದರೆ–ಜನನಮರಣ ತಪ್ಪಿ ನಿತ್ಯಾನಂದಪ್ರಾಪ್ತಿ. ಈ ಚತುರ್ವಿಧ ಪುರುಷಾರ್ಥಗಳನ್ನು ಪಡೆಯುವ ಸಾಮರ್ಥ್ಯವು ಮಾನವನಿಗಿರುವುದಲ್ಲದೆ ಇತರ ಯಾವ ಪ್ರಾಣಿವರ್ಗಕ್ಕೂ ಇರುವುದಿಲ್ಲ. ಈ ಪುರುಷಾರ್ಥಗಳಾದರೂ ವಿವೇಕಿಗಳಿಗೆ ಸಿದ್ಧಿಸುವುದಲ್ಲದೆ ವಿವೇಕಶೂನ್ಯರಿಗೆ ಎಂದೂ ಸಿದ್ಧಿಸಲಾರವು. ಸದ್ಯಃ ವಿಶೇಷವಾಗಿ ಜನರು ಧರ್ಮ ಮೋಕ್ಷಗಳೆರಡಕ್ಕೂ ಬಹಿಷ್ಕಾರವನ್ನು ಹಾಕಿ ಅರ್ಥ ಕಾಮಗಳೆರಡರಲ್ಲಿಯೇ ಮಗ್ನರಾಗಿದ್ದಾರೆ. ಇಂಥವರು ಜನನಮರಣರೂಪ ಸಂಸಾರದಲ್ಲಿ ಚಕ್ರನೇಮಿ ಕ್ರಮದಿಂದ ಸದಾ ಸುತ್ತುತ್ತಿರುವರು.



# ಸುಖಪ್ರಾಪ್ತಿಯೇ ಮಾನವನ ಗುರಿ



ಜಗತ್ತಿನಲ್ಲಿ ಪ್ರತಿಯೊಂದು ಪ್ರಾಣಿಯು ಸುಖವನ್ನು ಬಯಸುತ್ತದೆಯೇ ಹೊರತು ದುಃಖವನ್ನು ಎಂದೂ ಬಯಸುವುದಿಲ್ಲ. ಸುಖದುಃಖಗಳು ಪ್ರಾಣಿಗಳ ಪುಣ್ಯಪಾಪ ಕರ್ಮಾನುಸಾರವಾಗಿ ಬರುತ್ತವೆ. ಮನುಷ್ಯನು ದುಃಖವನ್ನು ಎಷ್ಟೂ ತಡೆಯಲಾರನು. ಸಂಸಾರರೂಪ ದುಃಖವು ಜೇಡರ ಹುಳುವು ಬಲೆಯನ್ನು ನೆಯ್ದು ತಾನೇ ಅದರೊಳಗೆ ಸಿಕ್ಕಿಕೊಂಡು ನರಳುವಂತೆ, ತನ್ನಿಂದಲೇ ಕಲ್ಪಿಸಿಕೊಂಡದ್ದಾಗಿದೆ, ಮನುಷ್ಯನಿಗೆ ಬರುವ ನಾನಾರೋಗಗಳಿಗೆ ವೈದ್ಯರು ಔಷಧವನ್ನು ಕೊಟ್ಟು ಗುಣಪಡಿಸುತ್ತಾರೆ. ಆದರೆ ಪುನಃ ರೋಗವು ಬಾರದಂತೆ ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ಸಂಸಾರವೆಂಬ ರೋಗಕ್ಕೆ ಔಷಧವನ್ನು ಕೊಡಲು ವೈದ್ಯರಿಂದ ಸಾಧ್ಯವಾಗಲಾರದು. ಆ ರೋಗವು ಗುರೂಪದೇಶದಿಂದ ದೊರೆತ ಜ್ಞಾನದ ಅಭ್ಯಾಸದಿಂದ ಪರಿಹಾರವಾಗುವುದು.

ಆತ್ಮನಿಗೆ ಪ್ರಾಪ್ತವಾಗಿರುವ ರೋಗವನ್ನು ನಿವಾರಿಸಿಕೊಳ್ಳಬೇಕಾದರೆ ಗುರುವೆಂಬ ವೈದ್ಯನು ಅವಶ್ಯ ಬೇಕು. ಇಲ್ಲದಿದ್ದರೆ ಬ್ರಹ್ಮದರ್ಶನವು ಎಂದಿಗೂ ಉಂಟಾಗಲಾರದು. ಆದ್ದರಿಂದಲೇ ಆಯಾಯ ಮತಗಳಲ್ಲಿ ಗುರುಗಳು ಏರ್ಪಟ್ಟು ಒಂದೊಂದು ಮುದ್ರೆಯನ್ನೊತ್ತಿ ಮತಗಳನ್ನು ಸ್ಥಾಪಿಸಿ. ಬ್ರಹ್ಮಸಾಕ್ಷಾತ್ಕಾರಕ್ಕೆ ಹೇತುಗಳಾಗಿರುವ ವಿವಿಧೋಪಾಸನೆಗಳನ್ನು ಬೋಧಿಸಿರುತ್ತಾರೆ. ವಿಚಾರಮಾಡಿ ನೋಡಿದರೆ ಎಲ್ಲ ಮತಗಳೂ ದೇವರ ಸ್ವರೂಪವನ್ನೇ ಬೋಧಿಸತಕ್ಕವಾಗಿವೆ. ನದಿಗಳು ಬೇರೆ ಬೇರೆ ಹೆಸರಿನಿಂದ ಹರಿದಾಗ್ಯೂ ಕೊನೆಗೆ ಎಲ್ಲವೂ ಸಮುದ್ರಕ್ಕೆ ಸೇರುವಂತೆ, ಎಲ್ಲಾ ಮತದವರೂ ಕಡೆಗೆ ಒಂದೇ ಸ್ಥಾನ

ವನ್ನು ಸೇರುವರು. "ಜಾತಿಗೆ ಭೇದವಿದ್ದರೂ ನೀತಿಗೆ ಭೇದವಿಲ್ಲ." ಎಂಬ ಆರ್ಯೋಕ್ತಿಯಂತೆ ಯಾವ ಮತದವರೇ ಆಗಲಿ, ದ್ವೇಷಾಸೂಯೆ ಗಳನ್ನು ಬಿಟ್ಟು ತಮ್ಮ ತಮ್ಮ ಧರ್ಮನಿಯಮದಂತೆ ನಡೆಯುತ್ತ ಸಹೋದರರಂತೆ ವರ್ತಿಸಬೇಕು. ಹೀಗೆ ನಡೆಯುವದರಿಂದ ಸರ್ವ ರಿಗೂ ಹಿತವಾಗುವದು. ಮತ್ತು ಪರಮಾತ್ಮನು ಸಹ ಸಂತುಷ್ಟನಾಗಿ ಅವರವರ ಬಯಕೆಗಳನ್ನು ಪೂರ್ಣಗೊಳಿಸುವನು. ದೇವರು ಒಂದೇ ಯಾಗಿದ್ದರೂ ಒಂದೊಂದು ಮತದವರು ಒಂದೊಂದು ಆಕಾರದಿಂದ ಬೇರೆ ಬೇರೆ ಹೆಸರುಗಳನ್ನಿಟ್ಟುಕೊಂಡು, ಬೇರೆ ಬೇರೆ ಕ್ರಮದಿಂದ ಪೂಜಿಸಿ, ಧ್ಯಾನಿಸಿ ತಮ್ಮ ತಮ್ಮ ಇಚ್ಛಿತ ಫಲವನ್ನು ಪಡೆಯುತ್ತಾರೆ. ಈ ಸಂಸಾರಕ್ರಮವು ಬಹಳ ಆಶ್ಚರ್ಯವನ್ನುಂಟುಮಾಡತಕ್ಕದಾಗಿದೆ. ಸಂಸಾರಿಗಳಿಗೊದಗುವ ನಾನಾ ದುಃಖಗಳನ್ನು ದೂರಮಾಡಲು ರಾಜ ರಿಂದೂ, ಗುರುಗಳಿಂದೂ ಏರ್ಪಟ್ಟಿದ್ದಾರೆ. ರಾಜರು ಹೊರಗೆ ಕೊಲೆ, ಸುಲಿಗೆ, ಕಳ್ಳತನ, ಸುಳ್ಳುತನ, ಅನ್ಯಾಯ, ಇತ್ಯಾದಿ ದುಷ್ಕಾರ್ಯ ಗಳು ಆಗದಂತೆ ನೋಡಿಕೊಳ್ಳುತ್ತಾರೆ. ಗುರುಗಳು ಅಂತರಾತ್ಮನಲ್ಲಿರ ತಕ್ಕ ದೋಷಗಳನ್ನು ಪರಿಹರಿಸಿ ಶುಚಿಯನ್ನಾಗಿ ಮಾಡಿ, ಬ್ರಹ್ಮಸಾಕ್ಷಾ ತ್ಕಾರವನ್ನುಂಟುಮಾಡಿಕೊಡುತ್ತಾರೆ. ಹೀಗೆ ಗುರುಗಳಿಂದ ಆತ್ಮನು ಪುಟಕ್ಕೆ ಹಾಕಿದ ಬಂಗಾರದಂತೆ ಪರಿಶುದ್ಧನಾಗಿ ಬ್ರಹ್ಮಸ್ವರೂಪವನ್ನು ಹೊಂದಲು ಅರ್ಹನಾಗುವನು. ರಾಜಾಜ್ಞೆಯನ್ನು ಮೀರಿ ನಡೆಯು ವವನು ದಂಡಕ್ಕೆ ಪಾತ್ರನಾಗುವಂತೆ ಗುರುವಿನಾಜ್ಞೆಯನ್ನು ಮೀರಿ ನಡೆಯುವವನು ಘೋರವಾದ ನರಕಯಾತನೆಯನ್ನು ಹೊಂದುವನು. ಆದುದರಿಂದ ಸರ್ವರೂ ಗುರುಗಳ ಆಜ್ಞೆಯಂತೆ ನಡೆದು ನಿತ್ಯ ಸುಖಿ ಗಳಾಗಬೇಕೆಂದು ಆಶಿಸುತ್ತೇವೆ.



# ಮನುಷ್ಯನಿಗೆ ಸುಖವು ಏತರಿಂದ ?



ಮನುಷ್ಯನಿಗೆ ಸುಖವು ದೊರಕಬೇಕಾದರೆ ಒಳ್ಳೆಯ ಗುಣಗಳಿಂದ ದೊರಕುತ್ತದೆಯೇ ಹೊರತು ಕೆಟ್ಟಗುಣಗಳಿಂದ ದೊರಕಲಾರದು. ಜಗತ್ತಿನಲ್ಲಿ ಎಲ್ಲರೂ ಸುಖವನ್ನೇ ಬಯಸುತ್ತಾರಲ್ಲದೆ ದುಃಖವನ್ನು ಯಾರೂ ಬಯಸುವುದಿಲ್ಲ. ಆದರೆ ಸುಖದುಃಖಗಳು ಅವರವರ ಪುಣ್ಯಪಾಪ ಕರ್ಮಾನುಸಾರ ದೊರಕುವವಲ್ಲದೆ ಸಹಜವಾಗಿ ದೊರಕಲಾರವು.

**ಕಃ ಕಸ್ಯ ಹೇತುರ್ದುಃಖಸ್ಯ ಕಶ್ಚ ಹೇತುಸ್ಸುಖಸ್ಯ ವಾ ।**
**ಸ್ವಪೂರ್ವಾರ್ಜಿತ ಕರ್ಮೈವ ಕಾರಣಂ ಸುಖದುಃಖಯೋಃ ॥**

ಇಹಲೋಕದಲ್ಲಿ ಸುಖವನ್ನೇ ಆಗಲಿ ದುಃಖವನ್ನೇ ಆಗಲಿ ಯಾವ ಪ್ರಾಣಿಗೂ ಯಾವ ಪ್ರಾಣಿಯೂ ಉಂಟುಮಾಡಲು ಸಾಧ್ಯವಿಲ್ಲ. ತಾನು ಹಿಂದಿನ ಜನ್ಮಗಳಲ್ಲಿ ಆಚರಿಸಿದ ಪುಣ್ಯಪಾಪ ಕೃತ್ಯಗಳ ಫಲಗಳೆ ಸುಖದುಃಖ ರೂಪಗಳಾಗಿ ಪರಿಣಮಿಸುತ್ತವೆಂದು ತಿಳಿದು ಪರರಲ್ಲಿ ಮಿತ್ರತ್ವ ಶತ್ರುತ್ವಾದಿಗಳಿಂದ ಪ್ರೀತಿ ದ್ವೇಷಾದಿಗಳನ್ನು ಪ್ರಕಟಿಸದೆ ದಾರಿದ್ರ್ಯ-ಐಶ್ವರ್ಯಗಳು ಪ್ರಾಪ್ತವಾದ ಕಾಲಗಳಲ್ಲಿ ಏಕರೂಪವಾಗಿದ್ದುಕೊಂಡು ನಿರ್ವಿಕಾರಚಿತ್ತತೆಯಿಂದ ತನ್ನ ಇಷ್ಟದೈವದಲ್ಲಿ ಅಚಂಚಲವಾದ ದೃಢಭಕ್ತಿಯನ್ನು ಇಟ್ಟು ವಿವೇಕಿಗಳು ಜನ್ಮಸಾಫಲ್ಯವನ್ನು ಹೊಂದಬೇಕು. ಮತ್ತು ಮಾವಿನ ಸಸಿಗಳನ್ನು ಹಚ್ಚಿದವನು ಮಾವಿನ ಹಣ್ಣನ್ನೂ, ಬೇವಿನ ಸಸಿಗಳನ್ನು ಹಚ್ಚಿದವನು ಬೇವಿನ ಹಣ್ಣನ್ನೂ ಪಡೆಯುವಂತೆ ಒಳ್ಳೆಯ ಕೆಲಸಗಳನ್ನು ಮಾಡಿದವನು ಸುಖವನ್ನೂ, ಕೆಟ್ಟಕೆಲಸಗಳನ್ನು ಮಾಡಿದವನು ದುಃಖವನ್ನೂ ಅನುಭವಿಸಿಯೇತೀರಬೇಕಾಗುವದು. “ಅತ್ಯುತ್ಕಟೈಃ ಪುಣ್ಯಪಾಪೈಃ ಇಹೈವ ಫಲಮಶ್ನುತೆ” ಎಂಬ ವಾಕ್ಯಾನುಸಾರವಾಗಿ ಬಹಳ ಉತ್ಕಟವಾದ ಪುಣ್ಯಪಾಪಗಳನ್ನು ಮಾಡಿದರೆ ಅವುಗಳ ಫಲವನ್ನು ಈ ದೇಹವಿರುವಾಗಲೇ ಅನುಭವಿಸು

ವುದಲ್ಲದೆ ಮುಂದಣ ಜನ್ಮಗಳಲ್ಲಿಯೂ ಅನುಭವಿಸಬೇಕಾಗುವದು. ಆದುದರಿಂದ ಮುಂದೆ ಸುಖವಾಗಬೇಕೆನ್ನುವವರು ಈ ಜನ್ಮದಲ್ಲಿ ಯಾವಾಗಲೂ ಸತ್ಕರ್ಮಗಳನ್ನೇ ಮಾಡುತ್ತಿರಬೇಕು. ಇದೇ ವಿಷಯ ವನ್ನು ಒಬ್ಬ ನೀತಿಕಾರನು :—

**ಗುಣಹೀನಗ ಥೋಗತಿ ನಿಜ ।**
**ಗುಣಿಗಂ ಸ್ವರ್ಗಾದಿ ಭೋಗಮುಕ್ಕುಮೆನಲ್ಕಾ ॥**
**ಗುಣಹೀನರ ಸಿರಿಯಿಂದಂ ।**
**ಗುಣಿಗಳ ಬಡತನವೆ ಲೇಸು ಚೂಡಾರತ್ನಾ ॥**

ಕೆಟ್ಟ ಗುಣವುಳ್ಳವನಿಗೆ ನರಕವಾಗುವುದೇ ನಿಶ್ಚಯವು. ಸದ್ಗುಣ ವುಳ್ಳವನಿಗೆ ಸ್ವರ್ಗಾದಿ ಸುಖವು ದೊರಕುವದು. ಕೆಟ್ಟ ಗುಣಗಳಿಂದ ಕೂಡಿದ ಶ್ರೀಮಂತನಿಗಿಂತಲೂ, ಒಳ್ಳೆಯ ಗುಣಗಳಿಂದ ಕೂಡಿದ ಬಡವನೇ ಉತ್ತಮನೆಂದು ಹೇಳಿದ್ದಾನೆ.

ಮತ್ತು ಲೋಕದಲ್ಲಿ "ಮನಮೇವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" || ಎಂಬ ವಚನಾನುಸಾರವಾಗಿ ಮನುಷ್ಯರ ಬಂಧನಕ್ಕೂ ಮೋಕ್ಷಕ್ಕೂ ಮನಸ್ಸೇ ಕಾರಣವಾಗಿರುವುದು. ಬಂಧನ ವೆಂದರೆ-ದುಃಖವೆಂದೂ, ಮುಕ್ತಿಯೆಂದರೆ-ಸುಖವೆಂದೂ ಸಿದ್ಧಾಂತವು. ಅಜ್ಞಾನದಿಂದ ದುಃಖವೂ, ಜ್ಞಾನದಿಂದ ಸುಖವೂ ಲಭಿಸುವವು. ಇಂದ್ರಿಯ ಸುಖದಲ್ಲಿ ಆಸಕ್ತಿಯನ್ನು ಇಟ್ಟು ದೇವರನ್ನು ಮರೆತಿರು ವುದೇ ಅಜ್ಞಾನವು. ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹ ಎಂಬ ಪಂಚಕೃತ್ಯಗಳಿಗೂ ದೇವರೇ ಅಧಿಪತಿ ಎಂದು ಭಾವಿಸಿ ದೇವರನ್ನು ಮುಂದಿಟ್ಟುಕೊಂಡು ನಡೆಯುವುದೇ ಜ್ಞಾನವು. ಇಂದ್ರಿಯಗಳ ಇಚ್ಛೆಗೆ ಮನಸ್ಸನ್ನು ಕೊಟ್ಟು ದೇವರನ್ನು ಮರೆಯುವ ಸ್ಥಿತಿಗೆ ಅಧೋಗತಿ ಎಂದೂ, ಇಂದ್ರಿಯಗಳನ್ನು ನಿಗ್ರಹಿಸಿ ದೇವರನ್ನು ಸೇವಿಸುವುದಕ್ಕೆ ಊರ್ಧ್ವಗತಿ ಎಂದೂ ಬಲ್ಲವರು ಹೇಳುವರು. ಒಂದು ದೊಡ್ಡ ಕಲ್ಲನ್ನು ಉನ್ನತವಾದ ಪರ್ವತದ ಮೇಲಿನಿಂದ ಸುಲಭವಾಗಿ

ಕೆಳಗೆ ಬೀಳಿಸಬಹುದು. ಆದೇ ಕಲ್ಲನ್ನು ನೆಲದಿಂದ ಪರ್ವತಾಗ್ರಕ್ಕೆ ಸಾಗಿಸುವುದು ಕಷ್ಟವಾಗಿರುವಂತೆ ಮನುಷ್ಯನು ಅಧೋಗತಿಗೆ ಇಳಿಯುವುದು ಬಹಳ ಸುಲಭವೂ, ಊರ್ಧ್ವಗತಿಗೆ ಏರುವುದು ಬಹಳ ಕಷ್ಟವೂ ಆಗಿರುವುದು. ಪಾಪವು ಪುಣ್ಯವು ಎಂದು ಎರಡು ವೃತ್ತಿಗಳು ಉಂಟು. ಪಾಪವನ್ನು ಕತ್ತಲೆಯಂತೆಯೂ ಪುಣ್ಯವನ್ನು ಬೆಳಕಿನಂತೆಯೂ ಹೇಳುತ್ತಾರೆ. ಆದರೆ ಬೆಳಕಿಲ್ಲದಿರುವುದೇ ಕತ್ತಲೆಯಾಗಬಹುದು, ಹಾಗೆ ಪುಣ್ಯವಿಲ್ಲದಿರುವುದೇ ಪಾಪವೆಂದು ಹೇಳಲಾಗುವುದಿಲ್ಲ. ಏಕೆಂದರೆ:—ಪಾಪಕಾರ್ಯವೇ ಬೇರೆ. ಪುಣ್ಯಕಾರ್ಯವೇ ಬೇರೆ. ಪಾಪಕಾರ್ಯವು ಅಧೋಗತಿಗೆ ಸೇರುವುದು. ಪುಣ್ಯಕಾರ್ಯವು ಊರ್ಧ್ವಗತಿಗೆ ಸೇರುವುದು. ಸುಖವಾಗಲಿ ದುಃಖವಾಗಲಿ ಐಹಿಕವೆಂದೂ ಆಮುಷ್ಮಿಕವೆಂದೂ ಎರಡು ವಿಧ. ಅನುಕೂಲ ವಿಷಯಾನುಭವದಿಂದ ಉಂಟಾಗುವ ಸುಖವೇ ಐಹಿಕ ಸುಖವು. ಪುಣ್ಯದಿಂದುಂಟಾಗುವ ಸ್ವರ್ಗಾದಿ ಭೋಗವೇ ಆಮುಷ್ಮಿಕ ಸುಖವು. ಪ್ರತಿಕೂಲ ವಿಷಯಾನುಭವದಿಂದ ಆಗುವ ದುಃಖವೇ ಐಹಿಕ ದುಃಖವು. ಪಾಪದಿಂದಾಗುವ ನರಕಾದಿಗಳೇ ಆಮುಷ್ಮಿಕದುಃಖವು. ಐಹಿಕ ಸುಖಕ್ಕಿಂತಲೂ ಆಮುಷ್ಮಿಕಸುಖವು ಹೆಚ್ಚಿನದು. ಐಹಿಕ ದುಃಖಕ್ಕಿಂತಲೂ ಆಮುಷ್ಮಿಕ ದುಃಖವು ಹೆಚ್ಚಿನದು ಆದಾಗ್ಯೂ ಐಹಿಕಾಮುಷ್ಮಿಕಗಳಾದ ಸುಖದುಃಖಗಳು ಶಾಶ್ವತವಲ್ಲ. ದುಃಖವನ್ನು ತಪ್ಪಿಸಿಕೊಂಡು ಸುಖವನ್ನು ಪಡೆಯಬೇಕೆಂಬುದೇ ಸರ್ವಪ್ರಾಣಿಗಳ ಉದ್ದೇಶವು. ತಿರ್ಯಗ್ಜಂತುಗಳಿಗೆ ಐಹಿಕ ಸುಖದುಃಖಗಳಲ್ಲದೆ ಆಮುಷ್ಮಿಕ ಸುಖದುಃಖಗಳಿಲ್ಲ. ಮನುಷ್ಯನಿಗೆ ಅವೆರಡೂ ಉಂಟು. ಐಹಿಕಾಮುಷ್ಮಿಕಗಳಾದ ಸುಖದುಃಖಗಳನ್ನು ಅನುಭವಿಸುವ ಸಕಲ ಪ್ರಾಣಿವರ್ಗಕ್ಕೂ ಜನನ-ಮರಣ ಪ್ರವಾಹರೂಪವಾದ ಸಂಸಾರಬಂಧವು ತಪ್ಪುವುದಿಲ್ಲ. ಪಾರಮಾರ್ಥಿಕನಿಗೆ ಮಾತ್ರ ನಿತ್ಯಸುಖವೆಂಬ ಮೋಕ್ಷವು ಲಭಿಸುವುದು.



# ಜಗತ್ತಿನಲ್ಲಿ ಧರ್ಮ ಮತ್ತು ಕೀರ್ತಿ ಇವೆರಡೇ ಸ್ಥಿರವಾದವುಗಳು

ಅಸ್ಥಿರಂ ಜೀವನಂ ಲೋಕೆ ಅಸ್ಥಿರೇ ಧನ ಯೌವನೇ ।
ಅಸ್ಥಿರೇ ಪುತ್ರನಾರ್ಯಾಶ್ಚ ಧರ್ಮ ಕೀರ್ತಿ ದ್ವಯಂ ಸ್ಥಿರಂ ॥

ಜೀವ ಮತ್ತು ಜಗತ್ತು ಸ್ಥಿರವಾದವುಗಳಲ್ಲ. ದುಡ್ಡು ಮತ್ತು ಪ್ರಾಯ ಇವೂ ಸ್ಥಿರವಾದವುಗಳಲ್ಲ. ಹೆಂಡರು ಮಕ್ಕಳು ಇವರೂ ಸ್ಥಿರ ವಾದವರಲ್ಲ. ಧರ್ಮ ಮತ್ತು ಕೀರ್ತಿ ಇವೆರಡೇ ಸ್ಥಿರವಾದವುಗಳೆಂದು ಶಾಸ್ತ್ರವು ಸಾರುತ್ತದೆ. ಮತ್ತು ಪ್ರತ್ಯಕ್ಷದಲ್ಲೂ ನೋಡುತ್ತೇವೆ.

ಅನಿತ್ಯಾನಿ ಶರೀರಾಣಿ ವಿಭವೋ ನೈವ ಶಾಶ್ವತಃ ॥
ನಿತ್ಯಂ ಸನ್ನಿಹಿತೋ ಮೃತ್ಯುಃ ಕರ್ತವ್ಯೋ ಧರ್ಮಸಂಗ್ರಹಃ ॥

ಈ ಶರೀರವು ನಿತ್ಯವಾದದ್ದಲ್ಲ. ಐಶ್ವರ್ಯವು ಶಾಶ್ವತವಾದುದಲ್ಲ. ಮೃತ್ಯು ದೇವತೆಯು ಯಾವಾಗಲೂ ಬೆನ್ನು ಹಿಂದೆ ಆವರಿಸಿಕೊಂಡು ನಿಂತಿರು ವಳು. ಆದುದರಿಂದ ಧರ್ಮವನ್ನು ಗಳಿಸುವುದೇ ಮಾನವನ ಮುಖ್ಯ ಕರ್ತವ್ಯವೆಂದು ಜ್ಞಾನಿಗಳು ಸಹ ಹೇಳುತ್ತಾರೆ.

# ಧರ್ಮವು ಗೋಪಾಲನಿಂದ ಭೂಪಾಲನವರೆಗೂ ಬೇಕು. ಮತ್ತು ಧರ್ಮವೇ ಪರಲೋಕ ಸಾಧನವಾಗಿರುವುದು

ಧರ್ಮಸ್ಯ ಹಿ ಸಹಾಯೇನ ತಮಸ್ತರತಿ ದುಸ್ತರಂ ।
ತಸ್ಮಾದ್ಧರ್ಮಂ ಸಹಾಯಾರ್ಥಂ ನಿತ್ಯಂ ಸಂಚಿನು ಯಾಚ್ಛನೈಃ ।

ಪ್ರಪಂಚದಲ್ಲಿ ಮಾನವ ಜನ್ಮವನ್ನು ಧರಿಸಿದ ಜೀವಾತ್ಮರಿಗೆಲ್ಲ ಧರ್ಮವೇ ಪರಲೋಕಸಾಧನವಾಗಿರುವುದಲ್ಲದೆ, ದ್ರವ್ಯವಾಗಲಿ, ಪತ್ನೀಪುತ್ರಾದಿ ಬಂಧುಗಳಾಗಲಿ, ಮಿತ್ರರಾಗಲಿ, ಆಪ್ತರಾಗಲಿ ಯಾರೂ ಸಹಾಯಕರಾಗುವುದಿಲ್ಲ. ಆತ್ಮರು ಈ ದೇಹವನ್ನು ಬಿಟ್ಟುಹೋಗುವ ಸಮಯದಲ್ಲಿ ಯಾರೂ ತಡೆದು ನಿಲ್ಲಿಸಲಾರರು. ಅಲ್ಲದೆ ಜೊತೆಗೆ ಯಾರೂ ಹೋಗಲಾರರು. ಧರ್ಮವು ಹಾಗೂ ಅಧರ್ಮವು ಮಾತ್ರ ಹಿಂಬಾಲಿಸುತ್ತವೆ. ಆತ್ಮರಲ್ಲಿ ಧರ್ಮಸಂಬಂಧವೇ ವಿಶೇಷವಾಗಿದ್ದರೆ ಅದು ಆತ್ಮರನ್ನು ಅಮಾರ್ಗದಲ್ಲಿ ಪ್ರವೇಶಮಾಡದಂತೆ ಎಚ್ಚರವಾಗಿದ್ದು ದೇವರ ಸಾನ್ನಿಧ್ಯವನ್ನು ಹೊಂದುವವರೆಗೂ ಸಹಾಯಮಾಡುವುದು. ಅಧರ್ಮವೇ ಹೆಚ್ಚಾಗಿದ್ದರೆ ಅದು ಆತ್ಮರನ್ನು ಪಿಶಾಚಿಯಂತೆ ದುರ್ಮಾರ್ಗದಿಂದ ತೆಗೆದುಕೊಂಡು ಹೋಗಿ ನರಕಕೂಪಕ್ಕೆ ಬೀಳುವವರೆಗೂ ಹಿಂಬಾಲಿಸಿ ಮರೆಯಾಗುವದು. ಆದ್ದರಿಂದ ಜ್ಞಾನದಿಂದೊಡಗೂಡಿದ ಮಾನವರು ಅಧರ್ಮಕ್ಕೆ ಇಂಬುಗೊಡದೆ ಪ್ರತಿಕ್ಷಣದಲ್ಲಿಯೂಸ್ವಲ್ಪ ಸ್ವಲ್ಪವಾಗಿ ಧರ್ಮಸಂಗ್ರಹವನ್ನು ಮಾಡುತ್ತ ಅಧರ್ಮವನ್ನು ದೂರೀಕರಿಸುತ್ತಿರಬೇಕು. ಮತ್ತು

ಮೃತಂ ಶರೀರ ಮುತ್ಸೃಜ್ಯ ಕಾಷ್ಠಲೋಷ್ಟ ಸಮಂ ಕ್ಷಿತೌ ।
ವಿಮುಖಾ ಬಾಂಧವಾಯಾಂತಿ ಧರ್ಮಸ್ತ ಮನುಗಚ್ಛತಿ ॥

ನುಷ್ಯನು ಜೀವಂತನಾಗಿರುವವರೆಗೂ ಎಲ್ಲರೂ ಅವನನ್ನು ಅನುಸರಿ ವರು. ಎಂದು ಮೃತಿಯನ್ನು ಹೊಂದುವನೋ ಅಂದೇ ಆ ಶರೀರ ನ್ನು ಕಟ್ಟಿಗೆಯಂತೆಯೂ, ಮಣ್ಣಿನಂತೆಯೂ ಅಲಕ್ಷ್ಯವಾಗಿ ಕಾಣುತ್ತ ಊರ ಹೊರಗಿರುವ ಸ್ಮಶಾನಕ್ಕೆಳೆದು ಬಂಧುಬಾಂಧವರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹಿಂತಿರುಗುವರು. ಅವನು ಆರ್ಜಿಸಿದ ಮನೆಮಠ ಗಳನ್ನು ಮಾತ್ರ ಆವರಿಸುತ್ತಾರೆ. ಮೃತನಾದ ಪುರುಷನ ಸಂಗಡ ಹೋಗಿ ನರಕದಿಂದ ತಪ್ಪಿಸಿ ಪುಣ್ಯಲೋಕವನ್ನು ಹೊಂದಿಸುವರಾರೂ ಇಲ್ಲ. ಅಂಥ ಕಷ್ಟಕಾಲದಲ್ಲಿ ಧರ್ಮವೆಂಬುವದು ಮಾತ್ರ ಅವನ ಸಂಗಡವೇ ಇದ್ದು ಮೃತಪುರುಷನನ್ನು ನರಕದಿಂದ ಮೇಲಕ್ಕೆಳೆದು ಉನ್ನತ ಪದವಿಯನ್ನು ಕೊಡುವುದರಿಂದ ಯಾವುದನ್ನು ಬಿಟ್ಟರೂ ಧರ್ಮವನ್ನು ಬಿಡದಿರುವುದೇ ಮಾನವಜನ್ಮದ ಮುಖ್ಯ ಉದ್ದೇಶವಾಗಿರು ವುದೆಂದು ಮಹಾಭಾರತದಲ್ಲಿಯೂ ಸಹ ಹೇಳಲ್ಪಟ್ಟಿರುವದು.



# ಧರ್ಮಾಧರ್ಮಗಳ ಸ್ವರೂಪ

ಅಹಿಂಸಾಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾಕ್ಷಮಾ ।
ದಾನಂ ಪೂಜಾಜಪೋಧ್ಯಾನ ಮಿತಿ ಧರ್ಮಸ್ಯ ಸಂಗ್ರಹಃ ॥

"ಅಹಿಂಸಾ ಪರಮೋ ಧರ್ಮಃ" ಎಂಬ ಶಾಸ್ತ್ರೋಕ್ತಿಯಂತೆ ಅಹಿಂಸೆಯು ಸಾಮಾನ್ಯಧರ್ಮವಾಗಿರದೆ ಉತ್ಕೃಷ್ಟವಾದ ಧರ್ಮವಾಗಿದೆ. ತನ್ನ ಮತ್ತು ತನ್ನ ಹೆಂಡರು ಮಕ್ಕಳುಗಳ ಸುಖ ಲಾಭಗಳಿಗೋಸ್ಕರ ಮನುಷ್ಯನೇ ಆದಿಯಾಗಿ ಯಾವ ಪ್ರಾಣಿಯನ್ನು ಕೊಲ್ಲದಿರುವುದೇ ಅಹಿಂಸೆಯು. (ಉತ್ಕೃಷ್ಟವಾದ ಧರ್ಮ.) "ಕೊಲ್ಲುವವನೆ ಮಾದಿಗ, ಹೊಲಸು ತಿನ್ನುವವನೇ ಹೊಲೆಯ." ಇತ್ಯಾದಿ ಬಸವಣ್ಣನವರ ವಚನಗಳು ಸಹ ಅವರ ಅಹಿಂಸಾ ಧರ್ಮನಿಷ್ಠೆಯನ್ನೂ ವಿಶ್ವಮಾನವ ಪ್ರೇಮವನ್ನೂ ಚನ್ನಾಗಿ ಬೋಧಿಸುತ್ತವೆ. ಸುಳ್ಳನ್ನಾಡದಿರುವುದೇ ಸತ್ಯವು. ಸತ್ಯವು ನಮ್ಮನ್ನು ಬೇಕಾದಂಥ ಕಷ್ಟಗಳಲ್ಲಿಯೂ ತಾಯಿಯಂತೆ ಕಾಪಾಡುವದು. ಅಸತ್ಯವು ಪ್ರಬಲವಾದ ವೈರಿಯಂತೆ ಅಧೋಗತಿಗೆ ನೂಕುವದು. ಆದ್ದರಿಂದಲೇ ಮಹಾತ್ಮರು "ಸತ್ಯಮೇವ ವಿಜಯತೇ ನಾನೃತಂ" ಎಂದು ಸಾರಿರುವರು.

ಸತ್ಯವು ರಾಜಮಾರ್ಗದಂತೆಯೂ ಅಸತ್ಯವು ಕಾಡುಮಾರ್ಗದಂತೆಯೂ ಇರುವದು. ಯಾವುದಾದರೊಂದು ವಿಷಯಕ್ಕೆ ಒಂದು ಸುಳ್ಳು ಹೇಳಿದರೆ ಅದನ್ನು ಸ್ಥಿರಪಡಿಸುವುದಕ್ಕೆ ಅನೇಕ ಸುಳ್ಳುಗಳನ್ನು ಹೇಳಬೇಕಾಗುವುದಲ್ಲದೆ ಪ್ರಮಾಣಗಳನ್ನು ಮಾಡಬೇಕಾಗುವದು. ಮತ್ತು ಸಾಕ್ಷಿಗಾರರೂ ಬೇಕಾಗುತ್ತಾರೆ. ಖೊಟ್ಟಿಕಾಗದಪತ್ರಗಳನ್ನು ಸಹ ಮಾಡಬೇಕಾಗುತ್ತದೆ. ಇಷ್ಟಾದರೂ ಕಡೆಗೆ ಸುಳ್ಳು ಸುಳ್ಳೇ ಆಗುತ್ತದೆ. ಕೊಲೆ, ಕಳ್ಳತನ, ವ್ಯಭಿಚಾರಗಳು ಸುಳ್ಳಿನ ಸಹಪಾಠಿ

ಗಳಾಗಿರುವವು. ಆದರೆ ಇವುಗಳು ಒಂದಿಲ್ಲೊಂದುದಿನ ಬೈಲಿಗೆ ಬಂದೇ ಬರುತ್ತವೆ.

ಸತ್ಯವೆಂಬುದು ತಾನು ಹಿತ್ತಲ ಗಿಡನೋಡಾ
ಮತ್ತೆಲ್ಲಿ ನೋಡಿಯರಸದೆ ತಾನಿರ್ದ
ಹತ್ತಿಲೇ ನೋಡು ! ಸರ್ವಜ್ಞ

ಸತ್ಯವು ಹಿತ್ತಲ ಗಿಡದಂತೆ ತನ್ನ ಹತ್ತರವೇ ಇದ್ದು ಬೇಕಾದ ಕೆಲಸಕ್ಕೆ ಸರಿಯಾದ ವೇಳೆಗೆ ದೊರಕಿ ಅನುಕೂಲವಾಗುವುದೆಂದು ಸರ್ವಜ್ಞನು ನಿಚ್ಚಳವಾಗಿ ಹೇಳಿದ್ದಾನೆ. ಆದ್ದರಿಂದ ಪ್ರತಿಯೊಬ್ಬರೂ ಅಸತ್ಯವನ್ನು ದೂರೀಕರಿಸಿ ಆದಷ್ಟು ಸತ್ಯವನ್ನು ಹೇಳುವುದಕ್ಕೆ ಪ್ರಯತ್ನಿಸಬೇಕು. ಕಳ್ಳತನದಿಂದ ಧನಾರ್ಜನೆಯನ್ನು ಮಾಡದೆ ಸುನೀತಿಯಿಂದ ಧನವನ್ನು ಗಳಿಸುವುದೇ ಅಸ್ತೇಯವು. ದುಡ್ಡು ಎಲ್ಲರಿಗೂಬೇಕು. ಆದರೆ ಅದನ್ನು ನ್ಯಾಯಮಾರ್ಗದಿಂದ ಸಂಪಾದಿಸಬೇಕೇ ಹೊರತು ಎರಡನೆಯವರಿಗೆ ಮೋಸಮಾಡಿ ಅಥವಾ ಕಳುವುಮಾಡಿ ಪ್ರಾಣಹಿಂಸೆಯನ್ನು ಮಾಡಿ ಸಂಪಾದಿಸಬಾರದು. ಹಾಗೆ ಗಳಿಸಿದ್ದಾದರೂ ಸ್ಥಿರವಾಗಿ ಉಳಿಯಲಾರದು. ಇದರ ಬಗ್ಗೆ ಓರ್ವ ಬ್ರಿಟಿಷ ತತ್ತ್ವಜ್ಞಾನಿಯು—

"God sees the Truth but waits. Ill Got ill Spent" ದೇವರು ಸತ್ಯವನ್ನೇ ನೋಡುತ್ತಾನೆ. ಆದರೆ ಅನ್ಯಾಯದಿಂದ ಗಳಿಸಿದ್ದು ಅನ್ಯಾಯಕ್ಕೆ ಖರ್ಚಾಗುವುದೆಂದು ಹೇಳಿದ್ದಾನೆ. ಆದುದರಿಂದ ನ್ಯಾಯಮಾರ್ಗದಿಂದ ಸಂಪಾದಿಸುವುದೇ ಸರ್ವೋತ್ತಮವು. ಮನಬಂದಂತೆ ಹರಿದಾಡತಕ್ಕ ಇಂದ್ರಿಯಗಳನ್ನು ತಡೆಯುವುದೇ ಬ್ರಹ್ಮಚರ್ಯವು. ಇಂಥ ನೈಷ್ಠಿಕಬ್ರಹ್ಮಚರ್ಯವನ್ನು ಸರಿಯಾಗಿ ಪಾಲಿಸಿದರೆ ಮನುಷ್ಯನಿಗೆ ಬಲವು ಹೆಚ್ಚುವದು. ವಿಶೇಷವಾಗಿ ಯಾವ ರೋಗಗಳೂ ಬರುವುದಿಲ್ಲ. ಮತ್ತು ಅಂತಹ ಬ್ರಹ್ಮಚಾರಿಯ ಬುದ್ಧಿಯು ಬಹು ತೀಕ್ಷ್ಣವಾಗಿರುತ್ತದೆ. ಬ್ರಹ್ಮತೇಜಸ್ಸು ಒಡಮೂಡು

ವದು. ಸ್ಮರಣಶಕ್ತಿಯು ಹೆಚ್ಚುವದು. ಆಯುಷ್ಯ ವೃದ್ಧಿಯಾಗುವದು. ಆದರೆ ನೈಷ್ಠಿಕ ಬ್ರಹ್ಮಚರ್ಯವು ಆತ್ಮಸಂಯಮವುಳ್ಳವರಿಗೂ ಪೂರ್ವ ಜನ್ಮದ ಪುಣ್ಯ ವಾಸನ ಮತ್ತು ಗುರುವಿನ ಅನುಗ್ರಹವುಳ್ಳವರಿಗೂ ಸಾಧ್ಯವೇ ಹೊರತು ಉಳಿದವರಿಗೆ ಸಾಧ್ಯವಿಲ್ಲ. ಬ್ರಹ್ಮಚಾರಿಯು ಯಾವಾಗಲೂ ಸಾತ್ವಿಕ ಆಹಾರವನ್ನು ಸೇವಿಸಬೇಕು. ವಿಶೇಷವಾಗಿ ಸ್ತ್ರೀಯರ ರೂಪವನ್ನು ನೋಡಬಾರದು. ಅವರ ಸೌಂದರ್ಯದ ವರ್ಣನವನ್ನು ಕೇಳಬಾರದು. ಶೃಂಗಾರ ರಸಮಯ ಕಥೆ ಕಾದಂಬರಿಗಳನ್ನು ಸರ್ವಥಾ ಓದಬಾರದು. ಲಕ್ಷ್ಮಣನು ಬ್ರಹ್ಮಚರ್ಯ ಬಲದಿಂದಲೇ ಬಲಾಢ್ಯನಾದ ಇಂದ್ರಜಿತುವನ್ನು ಜಯಿಸಿದನೆಂಬುದನ್ನು ಯಾರೂ ಮರೆಯಲಾಗದು. ಲಕ್ಷ್ಮಣನ ಈ ಆದರ್ಶವನ್ನು ಮುಂದಿಟ್ಟುಕೊಂಡು ಭಾರತೀಯ ಬ್ರಹ್ಮಚಾರಿಗಳು ಪಾಠಕಲಿಯಲಿ.

ಬ್ರಹ್ಮಚರ್ಯವನ್ನು ಪಾಲಿಸುವುದು ಸಾಧ್ಯವಾಗದಿದ್ದರೆ ಅಂಥವರು ಕೂಡಲೇ ಲಗ್ನವಾಗುವದು ಲೇಸು. ಹೆಸರಿಗೆ ಮಾತ್ರ ಬ್ರಹ್ಮಚಾರಿಯಾಗಿದ್ದು ಒಳಗೊಳಗೆ ಮೋಸಕೃತ್ಯ ನಡೆಯಿಸಿದ್ದೇಯಾದರೆ ಅಂಥವನು ಪತಿತನಾಗುವನು. ಮತ್ತು ಇಹಪರಗಳಿಗೂ ದೂರಾಗುವನು. ಲಗ್ನವಾಗಿ ಗೃಹಸ್ಥಾಶ್ರಮ ತಾಳಿದರೂ ಏಕಪತ್ನೀವ್ರತಸ್ಥನಾಗಿ ಗೃಹಸ್ಥಬ್ರಹ್ಮಚರ್ಯವನ್ನು ಪಾಲಿಸಲೇಬೇಕು. ಇದರಿಂದಲೂ ಅವನಿಗೆ ಸದ್ಗತಿವುಂಟಾಗುವದು. ಸರ್ವಪ್ರಾಣಿಗಳಲ್ಲಿ ಅಂತಃಕರಣವನ್ನು ತೋರಿಸುವುದೇ ದಯವು. "ತನ್ನ ಸುಖದುಃಖದೊಲು ಅನ್ಯರನು ನೋಡಿದಡೆ ಪನ್ನಂಗಧರ ತಾನೆ ನಿಜಶರಣ" ಎಂದು ನಿಜಶರಣ ತ್ರಿವಿಧಿಯಲ್ಲಿಯೂ ಸಹ ಹೇಳಲ್ಪಟ್ಟಿದೆ. ಪರರು ನಮಗೆ ಕೆಡಕು ಮಾಡಿದರೂ ಪುನಃ ಅವರಿಗೆ ಕೆಡಕುಮಾಡದೆ ಒಳ್ಳೆಯದನ್ನು ಮಾಡುವುದೇ ಕ್ಷಮೆಯು. 'ದಾನ' ಈ ಶಬ್ದಕ್ಕೆ ಕೊಡುವುದು ಎಂದು ಅರ್ಥವಾಗುವುದು. ಸಂಶಯವಿಲ್ಲದೆ ಸುವರ್ಣ, ಗೋವು, ಭೂಮಿ,

ಗೃಹ, ಅನ್ನ, ಧಾನ್ಯ ಮುಂತಾದವುಗಳನ್ನು ನನ್ನದು ಎನ್ನುವ ಮಮತೆಯನ್ನು ಬಿಟ್ಟು :—

ಮುಖೇಮಂತ್ರೋ ಹೃದಿಧ್ಯಾನಂ ಮಸ್ತಕೇ ಲಿಂಗಧಾರಣಂ ।
ಶಿಖಾರುದ್ರಾಕ್ಷಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ ॥

ವೀರಶೈವ ಬ್ರಾಹ್ಮಣನು ಮಂತ್ರಯುಕ್ತವಾದ ಮುಖದಿಂದಲೂ, ಧ್ಯಾನಯುಕ್ತವಾದ ಹೃದಯದಿಂದಲೂ, ಶಿವಲಿಂಗಯುಕ್ತವಾದ ಮಸ್ತಕದಿಂದಲೂ, ಶಿಖಾ, ರುದ್ರಾಕ್ಷ, ಭಸ್ಮಗಳಿಂದಲೂ ಯುಕ್ತನಾಗಿರಬೇಕೆಂದು ಗೌತಮಸ್ಮೃತಿಯು ಬೋಧಿಸುತ್ತದೆ. ಇತ್ಯಾದಿ ಲಕ್ಷಣಗಳಿಂದ ಕೂಡಿದ ವೀರಶೈವ ಲಿಂಗಿಬ್ರಾಹ್ಮಣರಿಗೆ ಕೊಡುವದು. ನಾವು ಯಾವ ಪದಾರ್ಥವನ್ನು ಕೊಡಬೇಕಾದರೂ ಯೋಗ್ಯಾಯೋಗ್ಯ ವಿಚಾರಮಾಡಿ ಸತ್ಪಾತ್ರಕ್ಕೆ ಕೊಡಬೇಕಲ್ಲದೆ, ಅಸತ್ಪಾತ್ರಕ್ಕೆ ಎಂದೂ ಕೊಡಬಾರದು. ಸತ್ಪಾತ್ರಕ್ಕೆ ಕೊಟ್ಟದ್ದೇ ಫಲವನ್ನು ಕೊಡುವುದಲ್ಲದೆ ಅಸತ್ಪಾತ್ರಕ್ಕೆ ಕೊಟ್ಟದ್ದು ಫಲವನ್ನು ಎಂದೂ ಕೊಡಲಾರದು. ಇದರ ಬಗ್ಗೆ ಒಬ್ಬ ನೀತಿಕಾರನು :—"ಕೊಡಬೇಕುತ್ತಮನಾದವಂಗೆ ಮಗಳಂ ಸತ್ಪಾತ್ರದೋಳ್ ದಾನಮಂ" ಮಗಳನ್ನು ಕೊಡಬೇಕಾದರೆ ಉತ್ತಮ ವರನಿಗೆ ಕೊಡಬೇಕು. ದಾನ ಮಾಡಬೇಕಾದರೆ ಸತ್ಪಾತ್ರಕ್ಕೆ ಮಾಡಬೇಕೆಂದು ಹೇಳಿದ್ದಾನೆ. "ದಾನೇನ ಪ್ರಾಪ್ಯತೇ ಸ್ವರ್ಗೋ ದಾನೇನ ಸುಖ ಮಶ್ನುತೆ" ದಾನ ಮಾಡುವುದರಿಂದ ಸ್ವರ್ಗಪ್ರಾಪ್ತಿಯೂ, ಸುಖವೂ ದೊರಕುತ್ತದೆಂದು ಶಾಸ್ತ್ರವು ಸಾರುತ್ತದೆ. ದಾನದ ಮಹಿಮೆಯು ಸಾಮಾನ್ಯವಾದುದಲ್ಲ.

ಒಂದು ದಿನ ಪ್ರಾತಃಕಾಲ ದೂರ್ವಾಸರು ಗಂಗೆಯಲ್ಲಿ ಸ್ನಾನ ಮಾಡಿ ಅಲ್ಲಿಯೇ ನಡುಮಟ್ಟ ನೀರಲ್ಲಿ ನಿಂತು ತಾರಕಮಂತ್ರ (ಪಂಚಾಕ್ಷರ) ಜಪಕ್ಕೆ ಆರಂಭಿಸಿದರು. ಅದೇ ಸಮಯಕ್ಕೆ ದ್ರೌಪದಿಯು ತನ್ನ ಗೆಳತಿಯರೊಡನೆ ಸ್ನಾನಕ್ಕಾಗಿ ಬಂದು ದೂರ್ವಾಸರ ಮೇಲ್ಬದಿಗೆ

ಸ್ವಲ್ಪ ದೂರ ಕೆಲವೇ ಮೊಳಗಳ ಅಂತರದಲ್ಲಿ ಸ್ನಾನ ಮಾಡತೊಡಗಿ ದಳು. ದಂಡೆಯಲ್ಲಿ ಸಣ್ಣ ಪುಟ್ಟ ಗಿಡಗಳು ಬೆಳೆದು ಸ್ವಲ್ಪ ಮರೆಯಾಗಿದ್ದುದರಿಂದಲೂ ನೀರಾಟದಲ್ಲಿ ಮಗ್ನರಾಗಿದ್ದುದರಿಂದಲೂ ಗೆಳತಿಯರ ಲಕ್ಷ್ಯವು ದೂರ್ವಾಸರ ಕಡೆಗೆ ಹೋಗಲಿಲ್ಲ. ಆದರೆ ಕುಶಲಳಾದ ದ್ರೌಪದಿಯು ದೂರ್ವಾಸರನ್ನು ಕೂಡಲೆ ಗುರುತಿಸಿದಳು. ಆದರೂ ರಸಭಂಗವಾಗುವುದೆಂದು ಆ ವಿಷಯದಲ್ಲಿ ಗೆಳತಿಯರಿಗೆ ಎಚ್ಚರಿಕೆ ಕೊಡಲಿಲ್ಲ. ಅವರ ನೀರಾಟ ಯಥಾವತ್ತಾಗಿ ಸಾಗಿತ್ತು. ಅಷ್ಟರಲ್ಲಿ ನಡೆದ ಚಮತ್ಕಾರವೆಂದರೆ ದೂರ್ವಾಸರು ಹಾಕಿಕೊಂಡಿದ್ದ ಕೌಪೀನವು ಕರ್ಮ ಧರ್ಮ ಸಂಯೋಗದಿಂದ ನೀರಿನ ಸೆಳವಿಗೆ ಕೊಚ್ಚಿಕೊಂಡು ಹೋಯಿತು. ದೂರ್ವಾಸರ ಮೈಮೇಲೆ ಮತ್ತಾವ ಬಟ್ಟೆಯೂ ಇರಲಿಲ್ಲ. ಬತ್ತಲೆಯಾದ ಅವರು ಗಡಬಡಿಸಿ ಕೌಪೀನವನ್ನು ಹಿಡಿಯಲು ಪ್ರಯತ್ನಿಸುವುದರೊಳಗಾಗಿಯೇ ಒಂದು ದೊಡ್ಡ ಮೀನು ಆ ಕೌಪೀನವನ್ನು ಕಚ್ಚಿಕೊಂಡು ನೀರಿನ ತಳವನ್ನು ಸೇರಿತು. ದೂರ್ವಾಸರು ಹತಾಶರಾದರು. ಅಲ್ಲಿಯವರೆಗೆ ಅವರಿಗೆ ತಮ್ಮ ಮೇಲ್ಭಾಗದಲ್ಲಿ ಸ್ತ್ರೀಯರು ಜಲಕ್ರೀಡೆಯಾಡುತ್ತಿರುವುದು ತಿಳಿದಿರಲಿಲ್ಲ. ತಿಳಿದೊಡನೆ ನಾಚಿಕೆ ಸಂಕೋಚಗಳು ಅವರನ್ನು ಆವರಿಸಿದವು. ದಂಡೆಯಲ್ಲಿ ಅವರ ಮಡಿಬಟ್ಟೆಗಳಿದ್ದರೂ ತಾವು ನೀರು ಬಿಟ್ಟು ಹೊರಬಿದ್ದರೆ ಬತ್ತಲೆಯಾದ ತಮ್ಮನ್ನು ಕಂಡು ಹೆಂಗಸರು ಏನು ತಿಳಿದುಕೊಳ್ಳುವರೋ ಎಂಬ ಶಂಕೆಯಿಂದ ಅವರು ನೀರನ್ನು ಬಿಟ್ಟು ಕದಲದಾದರು. ಬತ್ತಲೆಯಾಗಿ ನೀರಿನಲ್ಲಿ ನಿಲ್ಲುವುದೂ ಕಷ್ಟ. ಹೀಗಾಗಿ ದೂರ್ವಾಸರು ವಿಚಿತ್ರ ಸಂಕಟಕ್ಕೊಳಗಾಗಿ ನೀರಲ್ಲಿಯೇ ಚಡಪಡಿಸತೊಡಗಿದರು. ಜಲಕ್ರೀಡೆಯಲ್ಲಿದ್ದರೂ ಆಗಾಗ ದೂರ್ವಾಸರ ಕಡೆಗೆ ಭಕ್ತಿಯಿಂದ ನೋಡುತ್ತಿದ್ದ ದ್ರೌಪದಿಗೆ ದೂರ್ವಾಸರು ಕೌಪೀನವನ್ನು ಕಳೆದುಕೊಂಡು ತಳಮಳಗೊಳ್ಳುತ್ತಿರುವುದು ತಿಳಿಯಿತು. ಕೂಡಲೆ ಪ್ರತ್ಯುತ್ಪನ್ನಮತಿಯಾದ

ಆಕೆಯು ತನ್ನ ಸೀರೆಯ ಸೆರಗನ್ನು ಲಂಗೋಟಿಯಷ್ಟು ಉದ್ದ ಅಗಲ ತುಂಡುಮಾಡಿ ಹರಿದು ನೀರಿನ ಮೇಲೆ ತೇಲಿಸಿ ಬಿಡತೊಡಗಿದಳು. ಮೊದಲನೆಯ ತುಂಡು ದೂರ್ವಾಸರ ಮುಂದೆಯೇ ಹರಿದುಹೋದರೂ ಅಸಾವಧಾನರಾಗಿ ನಿಂತಿದ್ದರಿಂದ ಅದು ಅವರ ಕೈಗೆ ಹತ್ತಲಿಲ್ಲ. ಆಕಸ್ಮಾತ್ ತಮ್ಮ ಮುಂದೆ ಲಂಗೋಟಿಯಷ್ಟೇ ಅಳತೆಯ ಬೆಲೆಬಾಳುವ ರೇಶಿಮೆ ಶೀರೆಯ ತುಂಡು ಹರಿದು ಹೋದುದರಿಂದ ದೂರ್ವಾಸರಿಗೆ ಆಶ್ಚರ್ಯವಾಗಿ ಮೇಲ್ಬದಿಗೆ ಹೆಂಗಸರ ಗುಂಪಿನ ಕಡೆಗೆ ನೋಡಿದರು. ಆಗ ಅವರು ಕಂಡದ್ದೇನು? ಓರ್ವ ಸುಂದರಿಯು ಕೆಳಮುಖವುಳ್ಳವಳಾಗಿ ತನ್ನ ಸೀರೆಯ ಶರಗನ್ನು ಹರಿಹರಿದು ಲಂಗೋಟಿಯಷ್ಟು ತುಂಡುಗಳನ್ನು ತಮ್ಮ ಕಡೆಗೇ ಬಿಡುತ್ತಿದ್ದಾಳೆ. ಹತ್ತಿಪ್ಪತ್ತು ಸ್ತ್ರೀಯರು ಬೆಕ್ಕಸನೆ ಬೆರಗಾಗಿ ಪಿಟ್ಟೆನ್ನದೆ ಆಕೆಯನ್ನೇ ನೋಡುತ್ತಿದ್ದಾರೆ. ದೂರ್ವಾಸರಿಗೆ ಆ ಸುಂದರಿಯು ಯಾರೆಂಬುದು ಹೊಳೆಯದಿರಲಿಲ್ಲ. ಅಷ್ಟರಲ್ಲಿ ಮತ್ತೊಂದು ಸೀರೆಯ ತುಂಡು ದೂರ್ವಾಸರ ಹತ್ತಿರ ಹರಿದು ಬಂತು. ಅವರುಅದನ್ನು ತೆಗೆದುಕೊಂಡವರೇ ಭದ್ರವಾಗಿ ಲಂಗೋಟಿ ಹಾಕಿಕೊಂಡು ಸಂತೋಷದಿಂದ ಎರಡೂ ಕೈಗಳನ್ನೆತ್ತಿ ಗಟ್ಟಿಯಾಗಿ ಕೂಗಿ ಹೇಳಿದರು. ಸಾಕು ಮಗಳೇ! "ಸಾಕುಮಾಡು, ಈ ನಿನ್ನ ಉಪಕಾರವನ್ನು ದೂರ್ವಾಸನು ಎಂದೂ ಮರೆಯಲಾರ; ಇಗೋ ಕೇಳು ನನ್ನ ಆಶೀರ್ವಾದವನ್ನು ಅಕ್ಷಯಾಂಬರೆಯಾಗಿ (ಅಕ್ಷಯವಾದ ಸೀರೆಯುಳ್ಳವಳಾಗಿ) ನೀನು ಭಾರತದ ಪತಿವ್ರತೆಯರಲ್ಲಿ ಶ್ರೇಷ್ಠಳೆನಿಸು"

ದೂರ್ವಾಸರ ಈ ಆಶೀರ್ವಾದಬಲದಿಂದಲೇ ದ್ರೌಪದಿಗೆ ದುಶ್ಶಾಸನನು ಮಾನಭಂಗ ಮಾಡುವಕಾಲದಲ್ಲಿ ಶ್ರೀಕೃಷ್ಣನ ಕೃಪೆಯು ದೊರೆತು ಅಕ್ಷಯಾಂಬರೆಯಾದಳು. ಇದರಂತೆ ದಾನದ ಪುಣ್ಯವು ಅನೇಕ ವಿಪತ್ತುಗಳಿಂದ ಉಳಿಸಬಲ್ಲದು. ಆದುದರಿಂದ ಸತ್ಪಾತ್ರದಾನ ಮಾಡಬೇಕು.

ಈ ತತ್ತ್ವವನ್ನು ತಿಳಿದು ಹಿಂದೆ ಅನೇಕ ರಾಜಾಧಿರಾಜರು
ಶ್ರೀಮಂತರೂ, ಭೂದಾನ ಧನದಾನವನ್ನು ಮಾಡಿದ್ದಾರೆ. ಈ
೫-೬ ಸಾವಿರ ವರ್ಷಗಳ ಪೂರ್ವದಲ್ಲಿದ್ದ ಹಸ್ತಿನಾವತೀ ಸಿಂಹಾಸನ
ಧೀಶ್ವರ ಜನಮೇಜಯಭೂಪಾಲನು ಕೇದಾರ ಏಕೋರಾಮ ಪೀಠ
ಶ್ರೀಜಗದ್ಗುರುಗಳಿಗೆ ಒಂದು ಸಾವಿರ ಗ್ರಾಮಗಳನ್ನು ಇನಾಂ ಹಾ
ಕೊಟ್ಟದ್ದು, ಬಾಣಾಸುರನ ಮಗಳಾದ ಉಷಾದೇವಿಯು ಲಕ್ಷಾಂತ
ರೂಪಾಯಿಗಳನ್ನು ಖರ್ಚುಮಾಡಿ ಸದರೀ ಪೀಠವನ್ನು ಕಟ್ಟಿಸಿದ್ದು
ಮತ್ತು ಕಾಶೀ ಜಂಗಮವಾಡೀ ಮಠದ ವಿಶ್ವಾರಾಧ್ಯಪೀಠದ ಶ್ರೀಜ
ದ್ಗುರುಗಳಿಗೆ ರೀವಾ-ಮೈಹರ್-ಮೈಸೂರ ಮೊದಲಾದ ಹಿಂದ
ಮಹಾರಾಜರಲ್ಲದೆ ಅಕಬರ, ಹುಮಾಯೂನ್, ಶಹಾಜಹಾನ್, ಔರಂ
ಜೇಬ, ಜಹಂಗೀರ್, ಮುಹಮ್ಮದಷಾ ಮೊದಲಾದ ಮೊಗಲಚಕ್ರವರ್ತಿ
ಗಳು ಸಹ ಪೀಠಾಚಾರ್ಯರಲ್ಲಿ ವಿಶೇಷ ಭಕ್ತಿಯನ್ನಿಟ್ಟು ಎಷ್ಟೋ
ಭೂಮಿಯನ್ನು ಉಂಬಳಿಯಾಗಿ ಕೊಟ್ಟದ್ದು ಇವೆಲ್ಲಾ ನಮಗೆ ಪ್ರತ್ಯ
ಪ್ರಮಾಣಗಳಾಗಿವೆ.

ಒಂದು ಕಾಲದಲ್ಲಿ ಹಿಂದೂ ಮತದ ಕಡುವೈರಿಯಾದ ಔರಂ
ಜೇಬನು ಕಾಶೀಪೀಠವನ್ನು ನಾಶಮಾಡಬೇಕೆಂದು ಬಂದಾಗ್ಗೆ ಆ ಪೀಠ
ಪ್ರಭಾವದಿಂದ ಅವನಿಗೂ ಅವನ ದಂಡಿಗೂ ಮಹಾಭಯವು ಪ್ರಾ
ಯಾಗಲು ಗರ್ವದಿಂದ ದೂರನಾದ ಔರಂಗಜೇಬನು ಭಕ್ತಿಪರವಶನಾ
ಕೆಳಗೆ ಕಂಡಂತೆ ಅರ್ಥಗರ್ಭಿತವಾದ ವಿಷಯವನ್ನು ಉರ್ದುಭಾಷೆಯ
ನುಡಿದು ಶಾಸನವನ್ನು ಹಾಕಿಕೊಟ್ಟಿದ್ದಾನೆ.

"ನಾನು ಜಂಗಮವಾಡಿ ಮಠಕ್ಕೆ ಹೋದಕೂಡಲೆ ಒಂ
ಭಯಂಕರ ಮೂರ್ತಿಯು ನನ್ನ ಕಣ್ಣೆದುರಿಗೆ ಕಾಣಿಸಿಕೊಂಡಿತು.
ಮೂರ್ತಿಯು ಕಪ್ಪಾಗಿಯೂ ಪ್ರಲಯಾಗ್ನಿಯಂತೆ ಕೆಂಪುಕಣ್ಣುಗಳು
ದಾಗಿಯೂ ಕುರಿಯ ಕೂದಲುಗಳಂತೆ ಮಸ್ತಕದಲ್ಲಿ ಉಂಗುರ ಗೂದ

ಗಳುಳ್ಳದಾಗಿಯೂ ಆಕಾರದಲ್ಲಿ ಚಿಕ್ಕದಾಗಿದ್ದರೂ ಭೂಮಿಗೂ ಆಕಾಶಕ್ಕೂ ಏಕಾಕಾರವಾಗಿ ನಿಂತಿರುವಂತೆ ಕಂಡು ಭಯಗೊಂಡು ದೈವೀಶಕ್ತಿಗೆ ಶರಣಾಗತನಾಗಿ ಭಕ್ತಿಯಿಂದ ಇಂತಿಷ್ಟು ದಾನ ಮಾಡಿರುವೆನು ''

ಇತ್ಯಾದಿ ವಿಷಯಗಳನ್ನು ಉಲ್ಲೇಖಿಸಿದ್ದಾನೆ. ಅಸ್ತು. ಇದರಂತೆ ಈಗಲೂ ಕೆಲವರು ಈ ರೀತಿ ದಾನಮಾಡುತ್ತಿರುವುದನ್ನು ಪ್ರತ್ಯಕ್ಷ ನೋಡುತ್ತೇವೆ. ಮತ್ತು ಪತ್ರಿಕೆಯಲ್ಲಿ ಓದುತ್ತೇವೆ. ಕೆಲವರು ಮಾತ್ರ ತಾವೂ ಮಾಡುವುದಿಲ್ಲ; ಮಾಡುವವರಿಗೂ ಸೇರುವುದಿಲ್ಲ. ಹಿಂದಿನ ಹಿರಿಯರು ಮಾಡಿದ್ದನ್ನು ತಿರುಗಿ ತೆಗೆದುಕೊಳ್ಳಲಿಕ್ಕೆ ಪ್ರಯತ್ನಮಾಡುತ್ತಿರುವುದಲ್ಲದೆ ಅವರಿಗೇಕೆ ಕೊಡಬೇಕು? ಇವರಿಗೇಕೆ ಕೊಡಬೇಕು ಎಂದು ತಮ್ಮ ತಮ್ಮೊಳಗೆ ಗೊಣಗುಟ್ಟುತ್ತ ಮುಂದೆ ಮಾಡುವವರಿಗೂ ಸಹ ಅಡ್ಡಿಯನ್ನುಂಟುಮಾಡುತ್ತಿರುವರು. ಇಂಥ ನರಪಿಶಾಚಿಗಳು ಶುಕ್ರಾಚಾರ್ಯನಂತೆ ದುಃಖವನ್ನು ಹೊಂದದೆ ಇರಲಾರರು. ಮತ್ತು

ಧನವಂತಮದಾತಾರಂ ದರಿದ್ರಮತಪಸ್ವಿನಂ।
ಕಂಠೇ ಬಧ್ವಾ ಶಿಲಾಂ ಗುರ್ವೀಂ ಸಿಂಧುಮಧ್ಯೇ ವಿನಿಕ್ಷಿಪೇತ್ ॥

ಧನವಂತನಾಗಿ ದಾನಮಾಡದಿರುವವನನ್ನೂ ದರಿದ್ರನಾಗಿ ತಪಸ್ಸು (ಕಾಯಕಷ್ಟ) ಮಾಡದಿರುವವನನ್ನೂ ಹಿಡಿದು ತಂದು ಕುತ್ತಿಗೆಗೆ ಒಂದು ದೊಡ್ಡ ಕಲ್ಲನ್ನು ಕಟ್ಟಿ ಹೊಳೆಯಲ್ಲಿ ಎಸೆಯಬೇಕು. ಅರ್ಥಾತ್ ಅವರು ಜೀವಿಸಲು ಅಯೋಗ್ಯರು ಎಂದು ಶಾಸ್ತ್ರವು ಸಾರುತ್ತದೆ.

ದೇವರನ್ನೂ ಗುರುಗಳನ್ನೂ ಪ್ರತಿನಿತ್ಯದಲ್ಲಿ ಷೋಡಶೋಪಚಾರಗಳಿಂದ ಅರ್ಚಿಸುವುದೇ ಪೂಜೆಯು. ಪ್ರಣವಸಹಿತವಾದ ಮೂಲ ಪಂಚಾಕ್ಷರ ಮಹಾಮಂತ್ರದ ಪುನಃ ಪುನಃ ಉಚ್ಚಾರಣವೇ ಜಪವು. ಶಿವನ ಉಪಾಸಕರು "ಓಂ ನಮಶ್ಶಿವಾಯ" ಎಂಬ ಮೂಲ

ಪಂಚಾಕ್ಷರ ಮಂತ್ರವನ್ನೂ ವಿಷ್ಣುವಿನ ಉಪಾಸಕರು "ಓಂ ನಮೋ ನಾರಾಯಣಾಯ" ಎಂಬ ಅಷ್ಟಾಕ್ಷರ ಮಂತ್ರವನ್ನೂ ಶಕ್ತಿಯ ಉಪಾಸಕರು "ಓಂ ನಮೋ ಭಗವತೀ" ಎಂಬ ಮಂತ್ರವನ್ನೂ ಇತರ ಮೂರ್ತಿಗಳ ಉಪಾಸಕರು ಇತರ ಮೂರ್ತಿಗಳ ಮಂತ್ರವನ್ನೂ ಜಪಿಸತಕ್ಕದ್ದು. "ಶಂಭುರೀಶಃ ಪಶುಪತಿಃ ಶಿವಃ ಶೂಲೀ ಮಹೇಶ್ವರಃ" ಇತ್ಯಾದಿ ಭಗವಂತನ ನಾಮಸ್ಮರಣೆಯೇ ಧ್ಯಾನವು. ಇವೆಲ್ಲಾ ಧರ್ಮ ಕಾರ್ಯಗಳು, ಇವುಗಳನ್ನು ಪ್ರತಿಯೊಬ್ಬ ಮಾನವನು ಸಂಗ್ರಹಿಸಲೇ ಬೇಕೆಂದು ರೇಣುಕಾಚಾರ್ಯರು ಅಗಸ್ತ್ಯಮುನಿಗೆ ಸಿದ್ಧಾಂತಶಿಖಾ ಮಣಿಯಲ್ಲಿ ಅಪ್ಪಣೆಕೊಡಿಸಿದ್ದಾರೆ. ಇಂಥ ಧರ್ಮಗಳನ್ನು ಪರಿಪಾಲಿ ಸುತ್ತ ಬಂದರೆ ಅಂಥ ವಿವೇಕಿಯಾದ ಮಾನವನಿಗೆ ಭಯಂಕರ ಕಷ್ಟಗಳು ಸಹ ದೂರವಾಗಿ, ಅವನು ದೇವರ ಅನುಗ್ರಹಕ್ಕೆ ಪಾತ್ರ ನಾಗುವನಲ್ಲದೆ ಲೋಕವಂದ್ಯನಾಗುವುದರಲ್ಲಿ ಸಂದೇಹವಿಲ್ಲ.

"ಯಾಂತಿನ್ಯಾಯ ಪ್ರವೃತ್ತಸ್ಯ ತಿರ್ಯಂಚೋಽಪಿ ಸಹಾಯತಾಂ |
ಅಪಂಥಾ ನಂತು ಗಚ್ಛಂತಂ ಸೋದರೋಽಪಿ ವಿಮುಂಚತಿ ||"

ನ್ಯಾಯಮಾರ್ಗವನ್ನನುಸರಿಸಿದವನಿಗೆ ವಿವೇಕವಿಲ್ಲದ ಪಶು ಪಕ್ಷ್ಯಾದಿಗಳು ಸಹ ಸಹಾಯ ಮಾಡುತ್ತವೆ. ನ್ಯಾಯಮಾರ್ಗವನ್ನು ಬಿಟ್ಟು ಅಮಾರ್ಗದಲ್ಲಿ ಹೋಗುವವನಿಗೆ ತನ್ನ ಸಹೋದರರೂ ಸಹ ಮಹಾ ಶತ್ರುಗಳಾಗುತ್ತಾರೆ. ಎಂಬ ನೀತಿವಾಕ್ಯವನ್ನು ಪರ್ಯಾಲೋಚಿಸಿ ದರೆ ಅನ್ಯಾಯ ಮಾಡದ ಮನುಷ್ಯನಿಗೆ ಪರ್ವತದಂಥ ಕಷ್ಟಗಳು ಒದಗಿದರೂ ಆ ಕಷ್ಟ ಪರಂಪರೆಯೆಲ್ಲವೂ ತೋರಿ ಅಡಗುವ ಇಂದ್ರ ಚಾಪದಂತೆ ಉತ್ತರಕ್ಷಣದಲ್ಲಿಯೇ ಮಾಯವಾಗುವದು. ಇದಕ್ಕೆ ರಾಮ ಚಂದ್ರನೇ ಉದಾಹರಣೆಯಾಗಿರುತ್ತಾನೆ. ರಾಮನು ತನ್ನ ಪಿತೃವಿನಾಜ್ಞೆ ಯನ್ನು ಪರಿಪಾಲಿಸುವುದಕ್ಕಾಗಿ ದೇಶಕೋಶಗಳನ್ನೆಲ್ಲಾ ಬಿಟ್ಟು ಕಾಡಿ ನಲ್ಲಿ ವಾಸಮಾಡಿದನು. ಆಗ್ಗೆ ಮಾಯಾವಿಯಾದ ರಾವಣಾಸುರನು

ಧರ್ಮಪತ್ನಿಯಾದ ಸೀತೆಯನ್ನು ಅಪಹರಿಸಿದನು. ಆ ಕಾಲದಲ್ಲಿ ರಾಮನಿಗೆ ಯಾವದೊಂದು ಸಹಾಯವೂ ಇಲ್ಲದಾಯಿತು. ಆ ರಾಮನ ಸಚ್ಚರಿತ್ರೆಗೆ ಮೆಚ್ಚಿ ಕಾಡಿನಲ್ಲಿ ಸ್ವೇಚ್ಛಾವಿಹಾರಿಗಳಾದ ಕಪಿಗಳೂ ಸಹ ದೈವಪ್ರೇರಿತಗಳಾಗಿ ರಾಮನ ಕಷ್ಟ ಪರಿಹಾರದಲ್ಲಿ ಭಾಗಿಗಳಾದವು. ಇಂಥ ಸತ್ಯಶೀಲನಾದ ರಾಮನಿಗೆ ಅನ್ಯಾಯವನ್ನು ಮಾಡಿದ ಕ್ರೂರ ರಾವಣನಿಗೆ ಆತನ ತಮ್ಮನಾದ ವಿಭೀಷಣನೂ ಸಹ ವಿರೋಧಿಯಾಗಿ ರಾಮನಿಗೆ ಸಹಾಯವನ್ನು ಮಾಡಬೇಕಾಯಿತು. ಇದರಂತೆ ಹರಿಶ್ಚಂದ್ರ ಪಾಂಡವಾದಿ ಮಹಾರಾಜರೂ ಸಹ ತಮ್ಮ ತಮ್ಮ ನ್ಯಾಯವನ್ನು ಪರಿಪಾಲಿಸುವುದಕ್ಕಾಗಿ ಎಷ್ಟೋ ಕಷ್ಟಗಳನ್ನು ಅನುಭವಿಸಿದರು. ಕೊನೆಗೆ ಅವರಿಗೆ ದೇವತೆಗಳು ಸಹ ಪ್ರತ್ಯಕ್ಷರಾಗಿ ಬೇಡಿದ ವರಗಳನ್ನು ದಯಪಾಲಿಸಿದರೆಂಬುವದು ಜಗತ್ಪ್ರಸಿದ್ಧವೇ ಅದೆ. ಇವರು ತಮ್ಮ ಕಷ್ಟಗಳ ಮೇಲೆ ದೃಷ್ಟಿಯನ್ನಿಡದೆ ಧರ್ಮದಲ್ಲಿಯೇ ದೃಷ್ಟಿಯುಳ್ಳವರಾಗಿ, ತಮ್ಮ ದೇಹಮಾನವನ್ನೆಲ್ಲಾ ಕಳೆದುದರಿಂದ ಅವರು ಈಗ ಪ್ರತ್ಯಕ್ಷವಾಗಿಲ್ಲದಿದ್ದರೂ ಅವರ ಸಚ್ಚರಿತ್ರೆಯು ಪ್ರತಿಯೊಂದು ಆತ್ಮದಲ್ಲಿ ಮೂರ್ತೀಭವಿಸಿರುತ್ತದೆ. ಇದು ಪ್ರಾಚೀನ ಕಾಲದ ಮಾತಾಯಿತು. ಸದ್ಯಃ ಶ್ರೀ ಮಹಾತ್ಮಾ ಗಾಂಧಿಯವರು ಹಾಗೂ ಅವರ ಅನುಯಾಯಿಗಳಾದ ಪಂ|| ಶ್ರೀ ಜವಾಹಿರಲಾಲ್ ನೆಹರುಶವರು ಪ್ರತ್ಯಕ್ಷಪ್ರಮಾಣರಾಗಿದ್ದಾರೆ. ಅವರು ಸಹ ತಮ್ಮ ಅಹಿಂಸಾ, ಸತ್ಯ, ಪ್ರೇಮ, ಶಾಂತಿ ಇವೆಲ್ಲ ಧರ್ಮಗಳನ್ನು ಪರಿಪಾಲಿಸುತ್ತ ಭಾರತದ ಪ್ರಜೆಗಳ ಉದ್ಧಾರಕ್ಕಾಗಿ ಎಷ್ಟೋ ಸಂಕಟಗಳನ್ನು ಅನುಭವಿಸಿದರು. ಕಡೆಗೆ ಅವರಿಗೆ ಪರಮಾತ್ಮನ ಕೃಪೆಯಿಂದ ಭಾರತದ ಪ್ರಜೆಗಳೆಲ್ಲರೂ ಸಹಾಯಕರಾದರು. ಇವರ ಮನೋಬಯಕೆಯು ಪೂರ್ಣವಾಯಿತು. ಅರ್ಥಾತ್ ಭಾರತವು ಸ್ವತಂತ್ರವಾಯಿತು. ಇವರಾದರೂ ತಮ್ಮ ಸಂಕಟದ ಕಡೆಗೆ ಲಕ್ಷ್ಯಗೊಡದೆ ಭಾರತದ ಸೇವೆಯೇ ಭಗವಂತನ

ಸೇವೆಯೆಂದು ಭಾವಿಸಿ ತಮ್ಮ ತನು-ಮನ-ಧನವನ್ನೆಲ್ಲ ಸವಿಸಿ ನಮ್ಮ ವಿಜಯದ ಬಾವುಟದ ಬೆಳಕು ದಿಗ್‌ದಿಗಂತದಾಚೆ ಸದಾ ಪಸರಿಸಿ ಪಟಪಟ ಹಾರಾಡುವಂತೆ ಮಾಡಿದರು. ಮತ್ತು ಇವರು ಮಾಡಿದ ದೇಶಕಲ್ಯಾಣ ಕಾರ್ಯಗಳು ಅಮೋಘವಾಗಿವೆ. ಅನಂತವಾಗಿವೆ. ಆದುದರಿಂದ ಇವರ ಸಚ್ಚರಿತ್ರೆಯು ಭಾರತದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡತಕ್ಕದ್ದಾಗಿದೆ.

**ಜಯಭಾರತ ಜಯಕರ್ನಾಟಕ!**



ಪರನಿಂದೆ ಪರವಧೂಸಂಗ ಕುಟಿಲ ಕುಯುಕ್ತಿ ।
ಪರಹಿಂಸೆ ಕಪಟನಿರ್ದಯೆ ಕಠಿಣ ವಚನ ।
ಗುರುನಿರಾಕರಣೆ ಮದಮೋಹರಾಗದ್ವೇಷ ।
ದುರಿತಾದಿ ದುರ್ಗುಣಗಳು ತಮ್ಮೊಳಿರಲು ॥೧॥

ಎರಡನೆಯವರನ್ನು ದೂಷಿಸುವುದೇ ಪರನಿಂದೆ, ಕಾಮಾತುರನಾಗಿ ಪರಸ್ತ್ರೀಯರನ್ನು ಕೆಡಿಸುವುದೇ ಪರವಧೂಸಂಗ, ಚಾಟಕತನದಿಂದ ದುರಾಲೋಚನೆ ಮಾಡುವುದೇ ಕುಟಿಲಕುಯುಕ್ತಿ, ಎರಡನೇ ಪ್ರಾಣಿಯನ್ನು ಕೊಲ್ಲುವುದೇ ಪರಹಿಂಸೆ, ಎರಡನೆಯವರಿಗೆ ಮೋಸ ಮಾಡುವದೇ ಕಪಟ, ಪ್ರಾಣಿಗಳಲ್ಲಿ ಅಂತಃಕರಣವಿಲ್ಲದಿರುವುದೇ ನಿರ್ದಯ, ಪರರ ಮನಸ್ಸು ನೋಯುವಂತೆ ಬಿರಸು (ಕೆಟ್ಟ) ಮಾತುಗಳನ್ನಾಡುವುದೇ ಕಠಿಣವಚನ, ಗುರುವಿನ ಆಜ್ಞೆಯನ್ನು ಮೀರಿ ಮನಬಂದಂತೆ ವರ್ತಿಸುವುದೇ ಗುರುನಿರಾಕರಣೆ, ಗುರುವು ಸಾಮಾನ್ಯನಲ್ಲ ಆದುದರಿಂದ ಶಿಷ್ಯರು ತಮ್ಮ ತಮ್ಮ ಗುರುಗಳ ವಿಷಯದಲ್ಲಿ ಅಸಾಧಾರಣವಾದ ಪೂಜ್ಯಭಾವವನ್ನಿಟ್ಟು ವರ್ತಿಸಬೇಕು,

"ಗುರುಃ ಶಿವೋ ಗುರುರ್ಮಂತ್ರೋ ಗುರ್ರುರ್ಮಾತಾ ಗುರುಃ ಪಿತಾ |" ಎಂಬ ಶಾಸ್ತ್ರೋಕ್ತಿಯಂತೆ ಗುರುವೇ ಸಾಕ್ಷಾತ್ ಶಿವನೆಂದೂ, ಮಂತ್ರವೆಂದೂ, ತಾಯಿಯೆಂದೂ, ತಂದೆಯೆಂದೂ ಭಾವಿಸಿ ಅದರಂತೆ ನಡೆಯಬೇಕು. ಇದೇ ವಿಷಯವನ್ನು—

ಗುರುವಿಂದ ಬಂಧುಗಳು ಗುರುವಿಂದ ದೈವಗಳು
ಗುರುವಿಂದ ಅಹುದು ಪುಣ್ಯವು ಜಗಕೆಲ್ಲ
ಗುರುವಿಂದ ಮುಕ್ತಿ ಸರ್ವಜ್ಞ ||

ಗುರುವಿನಿಂದಲೇ ಎಲ್ಲವೂ ಎಂದು ಸರ್ವಜ್ಞನು ಕೂಡಾ ಸ್ಪಷ್ಟವಾಗಿ ಹೇಳಿದ್ದಾನೆ. ಮತ್ತು

ಧ್ಯಾನಮೂಲಂ ಗುರೋರ್ಮೂರ್ತಿಃ ಪೂಜಾಮೂಲಂ ಗುರೋಃ ಪದಂ |
ಮಂತ್ರಮೂಲಂ ಗುರೋರ್ವಾಕ್ಯಂ ಮುಕ್ತಿಮೂಲಂ ಗುರೋಃ ಕೃಪಾ ||

ಎಂದು ಗುರುವಿನ ಆಧಿಕ್ಯವನ್ನು ಸಾರುವ ಗುರುಗೀತೆಯ ಬೋಧೆಯನ್ನು ಪ್ರತಿಯೊಬ್ಬರೂ ಲಕ್ಷ್ಯದಲ್ಲಿಟ್ಟು ವರ್ತಿಸಬೇಕು.

ಯಃ ಪಶ್ಯತಿ ಗುರುಂಶಿಷ್ಯ ಉದಾಶೀನ ಮನೀಷಯಾ |
ಸ ಪಾಪಾತ್ಮಾ ಮಹಾಘೋರೆ ನರಕೇ ಪರಿವರ್ತತೇ ||

ಯಾವ ಶಿಷ್ಯನು ಗುರುವನ್ನು ಉದಾಸೀನಬುದ್ಧಿಯಿಂದ ಕಾಣುವನೋ ಅವನು ಮಹಾಪಾಪಿಯೆಂತಲೂ ಘೋರವಾದ ನರಕವನ್ನನುಭವಿಸುವನೆಂತಲೂ ಧರ್ಮಶಾಸ್ತ್ರವು ಸಿಂಹನಾದವನ್ನು ಮಾಡುತ್ತಿರುವುದು. ಮತ್ತು ಶ್ರೀಗುರುವಿನಿಂದ ಹೇಳಲ್ಪಟ್ಟ ಸಾಧನ (ನಿಯಮ) ಗಳನ್ನು ಮಾಡುವುದು ಶಿಷ್ಯರ ಮೊದಲನೆಯ ಕರ್ತವ್ಯವು. ನಂತರ ಗುರುವಿನಾಜ್ಞೆಯಂತೆ ನಡೆಯುವುದು ಎರಡನೆಯ ಕರ್ತವ್ಯವು. "ಪ್ರಥಮಂ ಸಾಧನಾವಸ್ಥಾ ಸಹಿತಂ ಗುರುಣಾಕೃತಂ | ದ್ವಿತೀಯಮಪಿ ಶಿಷ್ಯಸ್ತು ಗುರುವಾಕ್ಯಸ್ಯ ಪಾಲನಾತ್ ||" ಎಂದು ಶಾಸ್ತ್ರವು ಹೇಳುತ್ತದೆ. "ಸಾಧನಂ ವಿನಾ ಸಾಧ್ಯಾನಿಷ್ಪತ್ತೇಃ" ಎಂಬ ಭಾಷ್ಯೋಕ್ತಿ

ಯಂತೆ ಸಾಧನಗಳಿಲ್ಲದೆ ಸಾಧ್ಯವು ಸಿದ್ಧಿಸುವುದಿಲ್ಲ. ಆದುದರಿಂದ ಮೊದಲು ಸಾಧನವು ಬೇಕು.

ಇನ್ನು ಕೆಲವು ಮೂಢಮುಗ್ಧಭಕ್ತರು ವಂಶಪರಂಪರೆಯಿಂದ ಬಂದ ತಮ್ಮ ಪೂರ್ವದ ಗುರುಗಳನ್ನು ಸಂಪೂರ್ಣ ಬಿಟ್ಟು ಎರಡನೆಯರ ರೂಪ-ವೇಷ ವಾಗಾಡಂಬರಕ್ಕೆ ಮರುಳಾಗಿ ಅವರನ್ನು ಗುರುಗಳನ್ನಾಗಿ ಮಾಡಿಕೊಳ್ಳುತ್ತಾರೆ. ಇದು ಶಾಸ್ತ್ರವಿರೋಧವೂ, ಲೋಕವಿರೋಧವೂ ಆಗುತ್ತದೆ. ಏಕೆಂದರೆ ಪತಿವ್ರತಾ ಸ್ತ್ರೀಯು ತನ್ನ ಪತಿಯನ್ನು ಬಿಟ್ಟು ಪರಪುರುಷನನ್ನು ಕೂಡಿದರೆ ಆಕೆಯ ಪಾತಿವ್ರತ್ಯಕ್ಕೆ ಭಂಗಬರುವುದಲ್ಲದೆ ಆಕೆಯು ಬೇಕಾದಷ್ಟು ನಿಯಮೋಪವಾಸಾದಿ ವ್ರತಗಳನ್ನು ಆಚರಿಸಿದರೂ ಅವುಗಳಿಗೆ ಫಲವು ಹೇಗೆ ಸಿಗುವುದಿಲ್ಲವೋ ಹಾಗೆ ಮೇಲಿನ ಭಕ್ತರ ಸ್ಥಿತಿಯೂ ಆಗುವುದು. ಮತ್ತು

ಪ್ರಾಕ್ತನಂ ಗುರುಮುತ್ಸೃಜ್ಯಯಶ್ಚ ಗುರ್ವಂತರಂ ವ್ರಜೇತ್ ।
ಗುರುರನ್ಯಶ್ಚ ಶಿಷ್ಯೋವಾ ಭುಂಜಾತೇ ನರಕಂ ಧ್ರುವಂ ॥

ಸಿದ್ಧಾಂತಸಿದ್ಧವಾದ ಗುರುಪಟ್ಟವನ್ನು ವಹಿಸಿದ ಪೂರ್ವಗುರುಗಳನ್ನು ಬಿಟ್ಟು ಯಾರು ಬೇರೆ ಗುರುಗಳನ್ನು ಕಲ್ಪಿಸಿಕೊಳ್ಳುತ್ತಾರೆಯೋ ಅಂತಹ ನೂತನವಾಗಿ ಬಂದ ಗುರುವೂ ಮತ್ತು ಆ ಶಿಷ್ಯನೂ ಸಹ ನಿಶ್ಚಯವಾಗಿ ಘೋರವಾದ ನರಕಯಾತನೆಯನ್ನು ಅನುಭವಿಸುವರು ಎಂದು ವೀರಶೈವಸಿದ್ಧಾಂತವು ಸಾರುತ್ತದೆ.

ಮತ್ತೆ ಕೆಲವು ಭಕ್ತರು ವೇದಾಂತಿಗಳೊಳಗೆ (ಅದ್ವೈತಿಗಳನ್ನು) ಗುರುಗಳನ್ನಾಗಿ ಮಾಡಿಕೊಂಡು ಅವರು ಬಂದಾಗ್ಗೆ ಅವರಂತೆ, ವೀರಶೈವ ವೇದಾಂತವರ್ಗಕ್ಕೆ ಸೇರಿದ ತಮ್ಮ ಗುರುಗಳು ಬಂದಾಗ್ಗೆ ಇವರಂತೆ, ಹೀಗೆ ಎರಡು ವಿಧವಾಗಿ ನಡೆದುಕೊಳ್ಳುತ್ತಿರುವರು. ಇಂಥವರು ಸಹ ಯಾವ ಸಿದ್ಧಿಯನ್ನೂ ಯಾವ ಸುಖವನ್ನೂ ಹೊಂದಲಾರರು. ಏಕೆಂದರೆ—ವೇದಾಂತಿಗಳೊಳಗೆ (ಅದ್ವೈತಿಗಳಲ್ಲಿ) ಕರ್ಮವು ಅಸತ್ಯ

ಪೊದದ್ದು. ಸಾಯುಜ್ಯರೂಪವಾದ ಮುಕ್ತಿಗೆ ಕರ್ಮವು ಸಹಕಾರಿಯಾಗಿರುವುದೇ ಹೊರತು ಸಾಕ್ಷಾತ್ಕಾರಣವಲ್ಲವು. ಜ್ಞಾನವೇ ಸಾಕ್ಷಾತ್ಕಾರಣವು. ಜ್ಞಾನೋದಯ ಪರ್ಯಂತರ ಕರ್ಮವು ಆವಶ್ಯವಾದದ್ದು. ಜ್ಞಾನೋದಯ ಆದನಂತರದಲ್ಲಿ ದೇಹನಿಷ್ಠವಾದ ಗುಣಗಳೆಲ್ಲವು ನಷ್ಟವಾಗಿ ಅಸತ್ಯವಾದ ಕರ್ಮವು ನಾಶವಾಗುವುದೆಂದು ಹೇಳುವರು. ವೇದಾಂತಿವರ್ಗದಲ್ಲಿ ಸೇರಿದ ವೀರಶೈವ ಲಿಂಗಿಬ್ರಾಹ್ಮಣರು ಈಶ್ವರನೇ ಜಗತ್ಕಾರಣನು; ಮುಕ್ತಿಯು ಕೇವಲ ಕರ್ಮದಿಂದಲೂ ಆಗುವುದಿಲ್ಲ; ಕೇವಲ ಜ್ಞಾನದಿಂದಲೂ ಆಗುವುದಿಲ್ಲ; ಕರ್ಮಜ್ಞಾನಗಳೆರಡರಿಂದಲೇ ಆಗುವದು. ಕರ್ಮಜ್ಞಾನಗಳು ಸವಿಷಯಕಗಳೇ ಹೊರತು ನಿರ್ವಿಷಯಕಗಳಲ್ಲ. ಆತ್ಮನಲ್ಲಿ ಯಾವರೀತಿ ಜ್ಞಾನವುಂಟಾಗುವುದೋ, ಆ ಜ್ಞಾನಕ್ಕೆ ವಿಷಯವಾದ ಫಲಲಾಭಕ್ಕೋಸ್ಕರ ಕ್ರಿಯೆಯನ್ನು ಮಾಡಬೇಕು. ಲೋಕದಲ್ಲಿ ಒಂದು ಫಲವುಂಟಾಗಬೇಕಾದರೆ, ಆ ಫಲಜ್ಞಾನವೂ ಫಲವಿಷಯಕವಾದ ಕ್ರಿಯೆಯೂ ಇರಬೇಕು. ಫಲವಿಷಯಕವಾದ ಜ್ಞಾನವಿದ್ದಮಾತ್ರದಿಂದ ಫಲವು ಲಭಿಸಲಾರದು. ಜ್ಞಾನಕ್ಕನುಗುಣವಾದ ಬಾಹ್ಯ ಕ್ರಿಯೆಯನ್ನು ಮಾಡಿದರೆ, ಫಲವು ತನ್ನ ಸ್ವಾಧೀನವಾಗುವುದು, ಅದರಂತೆ ಸಾಯುಜ್ಯರೂಪವಾದ ಮುಕ್ತಿಫಲಪ್ರದಜ್ಞಾನವಿದ್ದಮಾತ್ರದಿಂದ ಪ್ರಯೋಜನವಿಲ್ಲವು. ಸ್ವಸಿದ್ಧಾಂತಿಗಳು ಹೇಳಿದ ಬಾಹ್ಯ ಸಲಕರಣೆಗಳನ್ನೂ, ಆಭ್ಯಂತರ ಸಲಕರಣೆಗಳನ್ನೂ ಹೊಂದಿ "ಕುಲಕ್ರಮಾಗತಾಚಾರಂ" ಎಂಬ ರೇಣುಕರ ಉಕ್ತಿಯಂತೆ ಸಿದ್ಧಾಂತಸ್ಥಾಪನಾಚಾರ್ಯರ ವಂಶಕ್ರಮದಿಂದ ಬಂದ ಗುರುಗಳಿಂದ ಕ್ರಿಯಾ-ಜ್ಞಾನಗಳೆರಡನ್ನು ತಿಳಿಸಿಕೊಂಡು ಗುರುಗಳ ಆಜ್ಞಾನುಸಾರವಾಗಿ ಕ್ರಿಯಾ-ಜ್ಞಾನಗಳೆರಡನ್ನೂ ನಿರ್ವಹಿಸುತ್ತಾ ಬಂದಲ್ಲಿ ಮುಕ್ತಿರೂಪವಾದ ಫಲವು ಲಭಿಸುವುದು. ಸರಿಯಾದ ಅದ್ವೈತವೂ ಇಲ್ಲದೆ ಸರಿಯಾದ ದ್ವೈತವೂ ಇಲ್ಲದೆ ಹೋದದ್ದಾದರೆ ತ್ರಿಶಂಕುವಿನ ಪರಿಸ್ಥಿತಿ

ಯನ್ನಾಗಲಿ, ಇಲ್ಲವೆ " ಹಂಸಸ್ಯ ಗತಿಮನ್ವಿಚ್ಛನ್ ಪೂರ್ವಗತ್ಯಾ ವಿವ ರ್ಜಿತಃ। ಇತೋಭ್ರಷ್ಟಸ್ತತೋಭ್ರಷ್ಟೋ ಬಕಃ ಖಂಜೋಪಿ ಕೇವಲಂ॥ " ಎಂಬಂತೆ ಒಂದು ಕೊಕ್ಕರೆಯು ಹಂಸಪಕ್ಷಿಯ ಹಾಗೆ ನಡೆಯಬೇಕೆಂದು ಯತ್ನಿಸಿ ಅದರ ನಡಿಗೆ ಬಾರದೆ ತನ್ನ ಪೂರ್ವದ ನಡಿಗೆಯು ತಪ್ಪಿ ಕುಂಟುವುದಕ್ಕಾರಂಭಿಸಿತು. ಎಂಬ ಅರ್ಥಕ್ಕೆ ಸರಿಯಾಗಿ ಇಂಥ ಪರಿ ಸ್ಥಿತಿಯನ್ನಾಗಲಿ ಹೊಂದಬೇಕಾಗುವದು. ಮತ್ತು " ರಾಜದ್ವಯಂ ರಾಷ್ಟ್ರನಿಪಾತ ಹೇತುಃ ಗುರುದ್ವಯಂ ಶಿಷ್ಯನಿಪಾತಹೇತುಃ । ವೈದ್ಯ ದ್ವಯಂ ರೋಗಿನಿಪಾತಹೇತುಃ ದೈವದ್ವಯಂ ಲೋಕನಿಪಾತಹೇತುಃ॥ "

ಒಂದು ದೇಶಕ್ಕೆ ಇಬ್ಬರು ದೊರೆಗಳಾದರೆ ಆ ದೇಶಕ್ಕೆ ಕೇಡು ತಪ್ಪದು. ಒಬ್ಬ ಶಿಷ್ಯನಿಗೆ ಇಬ್ಬರು ಗುರುಗಳಾದರೆ ಶಿಷ್ಯನು ಕೆಡುವನು. ಒಬ್ಬ ರೋಗಿಗೆ ಇಬ್ಬರು ವೈದ್ಯರು ಚಿಕಿತ್ಸೆಮಾಡಿದರೆ ಆ ರೋಗಿಗೆ ದುರವಸ್ಥೆ ಪ್ರಾಪ್ತವಾಗುವದು. ಒಂದೇ ಜಗತ್ತಿಗೆ ಇಬ್ಬರು ದೇವರಿರುವುದಾದರೆ ಲೋಕಸ್ಥಿತಿ ಹಾಳಾಗುವದು ಎಂಬ ನ್ಯಾಯದಂತಾಗುವದು. ಇದಲ್ಲದೆ ಸದ್ಗುರುವಿನ ಹಿರಿಮೆಯನ್ನು ಕುರಿತು—

" ಜನರು ಮುನಿದರೆ ನೃಪರು ಕಾಯ್ವರು ತನ್ನೃಪರು । ಮುನಿಯಲ್ಕೆ ಶಂಕರನು ಕಾಯ್ವನಾ ಶಂಕರನು ಮುನಿದ ಕಾಲಕ್ಕೆ ಗುರುವು ಕಾಪಾಡುವನು, ಗುರುವು ಮುನಿಯಲ್ಕೆ ಕಾವರಿಲ್ಲ ॥ ಎನುತ ಸಚ್ಛಾಸ್ತ್ರಗಳ್ ಘೋಷಿಸಲ್ಕದ ಕೇಳಿ ವಿನಯದಿಂ ನಿನ್ನ ಚರಣಕ್ಕಾನು ಪೊಡಮಡುವೆ ನನವರತ ಭೋ ಗುರುವೆ ನಿಜ ಸೌಖ್ಯವೆನಗಿತ್ತು ಕರುಣದಿಂ ಪರಿಪಾಲಿಸು ॥ "

ಹೀಗೆ ಜ್ಞಾನಿಗಳು ಸದ್ಗುರುವನ್ನೇ ನಿಜಸೌಖ್ಯಕ್ಕಾಗಿ ಪ್ರಾರ್ಥಿಸಿರುವರು. ಜನರು ಮುನಿದರೆ ರಾಜನು ಕಾಪಾಡುವನು, ರಾಜನು ಮುನಿದರೆ ದೇವರು ಕಾಪಾಡುವನು, ದೇವರು ಮುನಿದರೆ ಗುರುವು ಕಾಪಾಡುವನು; ಗುರುವು ಮುನಿದರೆ ಯಾರೂ ಕಾಯಲು ಸಮರ್ಥರಾಗರು. ' ನಗುರೋರಧಿಕಂ, ನಗುರೋರಧಿಕಂ ' ' ಹರ ಮುನಿದರೆ ಗುರು ಕಾಯ್ವ ' ಇತ್ಯಾದಿ ವಾಕ್ಯಗಳು ಇದೇ ಅಭಿಪ್ರಾಯವನ್ನು ವ್ಯಕ್ತ

ಪಡಿಸುತ್ತವೆ. ಮಹಾನುಭಾವರಾದ ಶಿವಶರಣ-ಶರಣೆಯರು ಗುರುವಿನ ಬಗ್ಗೆ ಮನಃಪೂರ್ವಕವಾಗಿ ಹೊಗಳಿದ್ದಾರೆ.

ಮೇಲೆ ಬರೆದ ಈ ಪವಿತ್ರ ಶಾಸ್ತ್ರ ವಿಷಯವನ್ನೆಲ್ಲಾ ಪ್ರತಿಯೊಬ್ಬರೂ ಚನ್ನಾಗಿ ತಿಳಿದುಕೊಂಡು ಗುರುಗಳ ವಿಷಯದಲ್ಲಿ ಅಸಾಧಾರಣವಾದ ಭಕ್ತಿಯನ್ನಿಟ್ಟು ವರ್ತಿಸಬೇಕು. ಇರಲಿ, ಗರ್ವದಿಂದ ನಡೆಯುವುದೇ ಮದ, ಮನುಷ್ಯನಿಗೆ ಗರ್ವವು ತರವಲ್ಲ. ಯಾಕಂದರೆ "ಅತ್ಯುನ್ನತಿಃ ಪತನಹೇತುಃ" ಎಂಬ ಶಾಸ್ತ್ರೋಕ್ತಿಯಂತೆ ಬಹಳ ಎತ್ತರವಾದದ್ದು ಒಮ್ಮಿಲ್ಲಾ ಒಮ್ಮೆ ನೆಲಕ್ಕೆ ಬೀಳುವುದೇ ನಿಶ್ಚಯ. ಈ ತತ್ತ್ವವನ್ನರಿತೇ ಬಲ್ಲವರು ಉದ್ದವಾದದ್ದು ಮುರಿಯುವದು, ಅಗಲವಾದದ್ದು ಹರಿಯುವುದು ಎಂದು ಹೇಳುತ್ತಿರುವುದು ಅಕ್ಷರಶಃ ನಿಜವದೆ. ಆದುದರಿಂದ ಆನೆಯಾಗಿ ಕಬ್ಬುಮೇಯುವುದಕ್ಕಿಂತ ಇರಿವೆಯಾಗಿ ಸಕ್ಕರೆ ಮೇಯುವುದು ಲೇಸು. ಅಸ್ತು! ಎರಡನೆಯವರ ಪದಾರ್ಥಕ್ಕೆ ಇಚ್ಛೆ (ಆಶೆ) ಮಾಡುವುದೇ ಮೋಹ, ಲೋಕಕ್ಕೆಲ್ಲ ಹೊನ್ನು ಹೆಣ್ಣು ಮಣ್ಣು ಈ ಮೂರು ಮುಖ್ಯವು. ಪ್ರತಿಯೊಬ್ಬ ಮಾನವನಿಗೂ ಈ ಮೂರು ವಸ್ತುಗಳು ಬೇಕೇ ಬೇಕು. ಬೇಕಾದರೂ ದೇವರು ತಮ್ಮ ಕರ್ಮಾನುಸಾರವಾಗಿ ತಮಗೆ ಕೊಟ್ಟಷ್ಟರಲ್ಲಿ ತೃಪ್ತಿಯನ್ನು ಹೊಂದಬೇಕು. ನಮಗಿಂತಲೂ ಕಡಿಮೆ ತರಗತಿಯ ಜನರನ್ನು ನೋಡಿ ನಾವು ಸಂತೋಷಪಡಬೇಕಲ್ಲದೆ, ನಮಗಿಂತಲೂ ಹೆಚ್ಚಿನ ತರಗತಿಯ ಜನರನ್ನು ನೋಡಿ ಅಸೂಯೆ ಪಡಬಾರದು; ಆಶೆ ಮಾಡಬಾರದು. ಮನುಷ್ಯನಿಗೆ ವಿಶೇಷ ಆಶೆಯು ತರವಲ್ಲ. "ಆಶಾಶಾ ಪರಮಂ ದುಃಖಂ ನಿರಾಶಾ ಪರಮಂ ಸುಖಂ" ಎಂಬುಕ್ತಿಯಂತೆ ಬಹಳ ಆಶೆಯಿಂದ ದುಃಖವುಂಟಾಗುವದು. ನಿರಾಶೆಯಿಂದ ಸುಖವಾಗುವದು. ಅತ್ಯಾಶೆ ಗತಿಗೆಡಿಸುವುದು ಎಂಬ ಮಾತು ಪ್ರಸಿದ್ಧವದೆ. ಇರಲಿ. ಅಪ್ರಾಪ್ತವಾದ ಇಷ್ಟಪದಾರ್ಥವು ಬೇಕು ಅನ್ನುವುದೇ ರಾಗ,

ಪ್ರಾಪ್ತವಾಗಿರುವ ಅನಿಷ್ಟ ಪದಾರ್ಥವು ಬೇಡ ಅನ್ನುವುದೇ ದ್ವೇಷ ಪಾಪಕ್ಕೆ ಮೂಲವಾಗಿರುವ ಇವೆಲ್ಲಾ ದುರ್ಗುಣಗಳನ್ನು ತಮಲ್ಲಿಟ್ಟು ಕೊಂಡು ಕಾಶಿ, ರಾಮೇಶ್ವರ ಮುಂತಾದ ನೂರು ಯಾತ್ರೆಗಳನ್ನು ಮಾಡಿದರೂ ಅದರ ಫಲ ಸಿಗುವುದಿಲ್ಲವೆಂದು ಶ್ರೀಸರ್ಪಭೂಷಣ ಶಿ ಯೋಗಿಗಳು ಹೇಳುತ್ತಾರೆ. ಮತ್ತು ಇಂಥ ಅಧರ್ಮಗಳನ್ನಾಚರಿಸ ವುದರಿಂದ ಸುಖವು ದೊರೆಯುತ್ತದೆಂದು ನಮಗೆ ತೋರಿದರೂ ಅಂ ಅಧರ್ಮದಲ್ಲಿ ಪ್ರವರ್ತಿಸದಿರುವುದೇ ಮನುಷ್ಯನ ಕರ್ತವ್ಯವು. ಪುಷ್ ವೆಂದು ಭ್ರಮಿಸಿ ದೀಪಕ್ಕೆ ಎರಗಿ ಸುಟ್ಟುಹೋಗುವ ಪತಂಗ ಳಂತೆಯೂ, ಮಾಂಸವನ್ನು ತಿನ್ನುವ ಆಶೆಯಿಂದ ಹೋಗಿ ಜಾಲದ ಶಿಕ್ಕು ಪ್ರಾಣವನ್ನು ಒಪ್ಪಿಸುವ ಮೀನದಂತೆಯೂ, ಸುಖವೆಂ ಭ್ರಮಿಸಿ ಅಧರ್ಮದಲ್ಲಿ ಮನಗೊಟ್ಟರೆ ಖಂಡಿತವಾಗಿ ಕಡೆಗೆ ದುಃ ವುಂಟಾಗುವುದಲ್ಲದೆ, ಸುಖವು ಮಾತ್ರ ಎಂದೂ ಉಂಟಾಗಲಾರದು ಇದನ್ನು ಸರ್ವರೂ ನೆನಪಿನಲ್ಲಿಡತಕ್ಕದ್ದು.

ಅಧರ್ಮವು ಯಾವಾಗಲೂ ನಾಶಕ್ಕೆ ಕಾರಣವು. ಇದರ ಬ ಒಂದು ಇತಿಹಾಸವುಂಟು. ಇಬ್ಬರು ಸ್ನೇಹಿತರು ಅರಣ್ಯದಲ್ಲಿ ಸಂಚಾ ಮಾಡುತ್ತಿದ್ದು ಸೂರ್ಯಾಸ್ತಂಗತನಾದಮೇಲೆ ಅದೇ ಅರಣ್ಯದಲ್ಲಿ ಒಂದಾನೊಂದು ಜೀರ್ಣ ದೇವಾಲಯದಲ್ಲಿ ಉಳಿದುಕೊಂಡರು. ಮ ರಾತ್ರಿಯಲ್ಲಿ ಒಬ್ಬ ಸ್ನೇಹಿತನು ಮೂತ್ರವಿಸರ್ಜನೆಗಾಗಿ ತನ್ನ ಸ್ನೇಹಿ ನನ್ನೆಬ್ಬಿಸಿದನು. ಆದಕ್ಕವನು ಇಲ್ಲಿಯೇ ಮೂತ್ರವಿಸರ್ಜನವ ಮಾಡೆಂದು ಬಹುವಿಧವಾಗಿ ಹೇಳಿದರೂ ಇದು ದೇವಾಲಯ, ಇ ಮೂತ್ರವಿಸರ್ಜನೆ ಮಾಡಕೂಡದೆಂದು ಹೇಳಿ, ತಾನೊಬ್ಬನೇ ದೆ ಸ್ಥಾನದ ಹೊರಗೆ ಹೋಗಿ ಮೂತ್ರವಿಸರ್ಜನೆ ಮಾಡಿದನು. ತಿರು ಬರುವ ಸಮಯದಲ್ಲಿ ಒಂದು ಮಹತ್ತರವಾದ ಮುಳ್ಳು ಅವನ ಕಾ ಚುಚ್ಚಲು ಅತ್ಯಂತ ವ್ಯಥೆಯಿಂದ ಸ್ನೇಹಿತನಿಗೆ ಈ ವಿಷಯವ

ಹೇಳಿದನು. ಅದಕ್ಕವನು ನಾನು ಎಷ್ಟೋವಿಧವಾಗಿ ಹೇಳಿದರೂ ನನ್ನ ಮಾತನ್ನು ನಿರಾಕರಿಸಿ ಹೊರಗೆ ಹೋಗಿ ಕಷ್ಟಕ್ಕೆ ಗುರಿಯಾದೆ; ನಾನು ದೇವಸ್ಥಾನದಲ್ಲಿಯೇ ಮೂತ್ರವಿಸರ್ಜನೆಯನ್ನು ಮಾಡುತ್ತ ಸ್ವಲ್ಪ ನೆಲವನ್ನು ಅಗೆಯಲು ದ್ರವ್ಯಸಿಕ್ಕಿತು. ಎಂದು ತೋರಿಸಿ ಆತನನ್ನು ಬಹಳವಾಗಿ ಹಾಸ್ಯಮಾಡುವುದಕ್ಕೆ ಪ್ರಾರಂಭಿಸಿದನು. ಈ ಬಗ್ಗೆ ಪಾರ್ವತೀ ದೇವಿಯು ಪರಮೇಶ್ವರನನ್ನು ಕುರಿತು "ಇದೇನನ್ಯಾಯ? ಆತನು ದೇವಸ್ಥಾನವೆಂದು ಭಕ್ತಿಯಿಂದ ಹೊರಗೆ ಮೂತ್ರವಿಸರ್ಜನೆ ಮಾಡುವುದಕ್ಕೆ ಹೋದವನು. ಅತ್ಯಂತ ಕಷ್ಟಕ್ಕೆ ಗುರಿಯಾದನು. ದೇವಸ್ಥಾನದಲ್ಲಿಯೇ ಮೂತ್ರವಿಸರ್ಜನೆಮಾಡಿದವನು ಅಲ್ಲಿ ದ್ರವ್ಯಲಾಭವಾದುದರಿಂದ ಬಹು ಸಂತುಷ್ಟನಾಗಿ ಆತನನ್ನು ಹಾಸ್ಯಮಾಡುತ್ತಿರುವನಲ್ಲಾ!" ಎಂದು ಪ್ರಶ್ನೆಮಾಡಿದುದಕ್ಕೆ ಈಶ್ವರನು—ಹಾಗಲ್ಲ; ಆ ಕಷ್ಟಕ್ಕೆ ಗುರಿಯಾದವನಿಗೆ ಈ ದಿವಸ ಮೃತ್ಯುವು ಪ್ರಾಪ್ತವಾಗಬೇಕಾಗಿತ್ತು. ಅದು ಸ್ವಲ್ಪ ಕಷ್ಟದಲ್ಲಿಯೇ ಪರಿಹಾರವಾಯಿತು. ಇನ್ನೊಬ್ಬನಿಗೆ ರಾಜ್ಯಾಧಿಕಾರವಾಗಬೇಕಾಗಿತ್ತು; ಅದು ತಪ್ಪಿ ಸ್ವಲ್ಪ ದ್ರವ್ಯ ಪ್ರಾಪ್ತಿಯಲ್ಲಿಯೇ ಪೂರ್ಣವಾಯಿತು; ಎಂದು ಹೇಳಿದನು. ಒಟ್ಟನ ಮೇಲೆ ಮನುಷ್ಯನು ಧರ್ಮರಹಿತನಾದರೆ ಹಿಂದಿನ ಪುಣ್ಯಪ್ರಭಾವದಿಂದ ದೊರೆಯಬೇಕಾದ ಮಹತ್ತರವಾದ ಫಲವು ಸಹ ನಾಶವಾಗಿ ಸ್ವಲ್ಪದರಲ್ಲಿಯೇ ತೃಪ್ತಿಯನ್ನು ಹೊಂದುವನು. ಧರ್ಮವುಳ್ಳವನಾದರೆ ಹಿಂದಿನ ಪಾಪಕರ್ಮದಿಂದ ಒದಗಬೇಕಾಗಿದ್ದ ಭಯಂಕರವಾದ ಕಷ್ಟವೂ ಕೂಡಾ ದೂರವಾಗಿ ಸುಖದಿಂದ ಬಾಳುವನು. ಎಂದು ಈ ಇತಿಹಾಸದಿಂದ ಸರ್ವರಿಗೂ ಗೊತ್ತಾಗುವದು.



# ಸಾಮಾನ್ಯ ವಿಶೇಷ ಧರ್ಮಗಳು

ಈ ಸಾಮಾನ್ಯಧರ್ಮದ ಮುಖ್ಯ ತಿರುಳನ್ನು ಭಗವಾನ್ ವ್ಯಾಸ ಮಹರ್ಷಿಯು ಈ ರೀತಿಯಾಗಿ ಬೋಧಿಸುತ್ತಾನೆ.

ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ ॥

ಅಯ್ಯಾ ಮಹರ್ಷಿಗಳಿರಾ! ಇದುವರೆಗೆ ಅನಂತಗ್ರಂಥಗಳನ್ನು ಧರ್ಮಸ್ವರೂಪ ನಿರ್ಣಯಕ್ಕೋಸ್ಕರ ಬರೆದೆನು. ಅವುಗಳ ಸಾರವನ್ನೆಲ್ಲಾ ಅರ್ಧ ಶ್ಲೋಕದಲ್ಲಿ ನಿಮಗೆ ತಿಳಿಸುವೆನು. ಮತ್ತೊಬ್ಬರಿಗೆ ಒಳಿತನ್ನು ಮಾಡುವುದರಿಂದ ಪುಣ್ಯವು ಬರುತ್ತದೆ. ಕೇಡನ್ನು ಮಾಡುವುದರಿಂದ ಪಾಪವುಂಟಾಗುತ್ತದೆಂದು ಹೇಳಿ ಸುಮ್ಮನಾದನು. ನಮ್ಮ ತತ್ತ್ವವಾದರೂ ಸತ್ಯವನ್ನು ಹೇಳು, ನೀಚಸ್ವಾರ್ಥತೆಯನ್ನು ಶೀಳು, ದುರಭಿಮಾನ ದುರಹಂಕಾರಗಳ ಬೇರನ್ನು ಕೀಳು, ಧೈರ್ಯವನ್ನು ತಾಳು, ಪರಹಿತಕ್ಕೆ ಏಳು, ನಿತ್ಯಸುಖದಲ್ಲಿ ಬಾಳು, ಈ ತತ್ತ್ವಸಾರವನ್ನು ಕೇಳು, ಕೇಳದಿದ್ದರೆ ಮೂಢಾ ನಿನ್ನ ಜನ್ಮ ವ್ಯರ್ಥ ಹಾಳು ಎಂದು ಬೋಧಿಸುವದು. ಪ್ರತಿಯೊಬ್ಬ ಮನುಷ್ಯನು ಈ ಸಾಮಾನ್ಯ ಧರ್ಮಗಳೊಂದಿಗೆ ತನ್ನ ಮತದ ವಿಶೇಷ ಧರ್ಮದ ಕರ್ಮಾನುಷ್ಠಾನವನ್ನು ಪ್ರತಿನಿತ್ಯ ತಪ್ಪದೆ ಮಾಡುತ್ತಿರಬೇಕು. ಯಾವನು ಧರ್ಮವನ್ನು ರಕ್ಷಿಸುವನೋ ಆ ಧರ್ಮವೇ ಅವನನ್ನು ರಕ್ಷಿಸುತ್ತದೆ. ಯಾವನು ಧರ್ಮವನ್ನು ನಾಶಮಾಡುವನೋ ಆ ಧರ್ಮವೇ ಅವನನ್ನು ನಾಶ ಮಾಡುತ್ತದೆ. "ಧರ್ಮ ಏವ ಹತೋಹಂತಿ ಧರ್ಮೋ ರಕ್ಷತಿ ರಕ್ಷಿತಃ ॥" ಎಂದು ಮನುಸ್ಮೃತಿಯು ಸಾರುತ್ತದೆ.

ಯಶ್ಶಾಸ್ತ್ರ ವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।
ನಸಸಿದ್ಧಿಮ ವಾಪ್ನೋತಿ ನ ಸುಖಂ ನ ಪರಾಂಗತಿಂ ॥

ಯಾವನು ಶಾಸ್ತ್ರನಿಯಮವನ್ನು ಅತಿಕ್ರಮಿಸಿ ತನ್ನ ಇಚ್ಛಾನುಸಾರವಾಗಿ ವರ್ತಿಸುವನೋ ಅಂಥವನು ಯಾವ ಸಿದ್ಧಿಯನ್ನೂ, ಯಾವ ಸುಖವನ್ನೂ, ಯಾವ ಸದ್ಗತಿಯನ್ನೂ ಹೊಂದಲಾರನೆಂದು ಗೀತಾಕಾರರು ಸಹ ಸ್ಪಷ್ಟವಾಗಿ ಹೇಳಿದ್ದಾರೆ.

# ಆಸ್ತಿಕ-ನಾಸ್ತಿಕ ಮತಗಳು

ವೇದಾಗಮಗಳನ್ನು ನಂಬದವರು ನಾಸ್ತಿಕರೆಂದೂ, ವೇದಾಗಮಗಳನ್ನು ನಂಬುವವರು ಆಸ್ತಿಕರೆಂದೂ ಮನು ಮೊದಲಾದ ಋಷಿಗಳು ಹೇಳುತ್ತಾರೆ. ನಾಸ್ತಿಕ ಮತಗಳು :—ದೇಹವೇ ಆತ್ಮನು. ಸುಖವೇ ಸ್ವರ್ಗ, ದುಃಖವೇ ನರಕ ಎಂದು ಪ್ರತಿಪಾದಿಸುವವು. ಮತ್ತು “ ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ । ತಸ್ಮಾತ್ಸರ್ವಪ್ರಯತ್ನೇನ ಋಣಂ ಕೃತ್ವಾ ಘೃತಂ ಪಿಬೇತ್ ॥ ” ದೇಹವೇ ಆತ್ಮವಾದುದರಿಂದ ದೇಹವು ಸುಟ್ಟುಹೋದಬಳಿಕ ಪುನಃ ಹುಟ್ಟುವುದಿಲ್ಲವು. ಆದುದರಿಂದ ಸಾಲವನ್ನಾದರೂ ಮಾಡಿ ತುಪ್ಪವನ್ನುಂಡು ಸುಖಪಡಬೇಕು. ಅರಿಶಿನವನ್ನೂ, ಸುಣ್ಣವನ್ನೂ ಕೂಡಿಸಿದರೆ ಹೊಸದಾದ ಒಂದು ಕೆಂಪು ಹುಟ್ಟುವಂತೆಯೂ, ಸಗಣಿಯಲ್ಲಿ ಹುಳಗಳು ಹುಟ್ಟುವಂತೆಯೂ, ಜಡವಾದ ಪೃಥಿವ್ಯಾದಿ ಪಂಚಭೂತಗಳ ಸಂಯೋಗದಿಂದ ಒಂದು ವಿಲಕ್ಷಣವಾದ ಚೇತನವು ಹುಟ್ಟುವುದು; ಇದೇ ಜೀವವು. ಘಟಾದಿಗಳಂತೆ ಕಣ್ಣಿಗೆ ಗೋಚರವಾಗದಿರುವುದರಿಂದ ಬ್ರಹ್ಮರೂಪವಾದ ವಸ್ತುವು ಇರುವುದೆಂದು ಹೇಳುವುದಕ್ಕಾಗುವುದಿಲ್ಲವು. ಆದುದರಿಂದ ಶರೀರಕ್ಕಿಂತಲೂ ಬೇರೆಯಾದ ಜೀವಾತ್ಮನಾಗಲಿ, ಪರಮಾತ್ಮನಾಗಲಿ ಇಲ್ಲವೆಂದು ಪ್ರತಿಪಾದಿಸುತ್ತವೆ.

ಆಸ್ತಿಕಮತಗಳು—ಆತ್ಮರು ದೇಹವಿಲಕ್ಷಣರು ದೇಹವು ಜಡವು. ಆತ್ಮನು ಚೇತನನು. ಈ ಆತ್ಮನು ಜೀವಾತ್ಮನೆಂದೂ, ಪರಮಾತ್ಮನೆಂದೂ ಎರಡು ವಿಧವು. ಪರಮಾತ್ಮನು ವ್ಯಾಪಕನು, ಜೀವಾತ್ಮನು ವ್ಯಾಪ್ಯನು. ಪರಮಾತ್ಮನ ಸಾಕ್ಷಾತ್ಕಾರವಾದರೆ ಜೀವಾತ್ಮನು ಉದ್ಧೃತನಾಗುವನು, ಪ್ರಪಂಚವು ಪರಮಾತ್ಮನಿಂದ ಸೃಷ್ಟವಾದುದು. ಐಹಿಕ ಸುಖದುಃಖಗಳೆಲ್ಲವೂ ಕ್ಷಣಿಕಗಳು ಎಂದು ಪ್ರತಿಪಾದಿಸುತ್ತವೆ.



ಶ್ರೀಪರಶಿವಬ್ರಹ್ಮವು

# ಪ್ರಮಾಣಗ್ರಂಥಗಳೂ, ಈಶ್ವರಾಜ್ಞೆಯೂ

ಭರತಖಂಡದಲ್ಲಿ ಜನ್ಮವೆತ್ತಿದ ಹಿಂದುಗಳಿಗೆಲ್ಲ ವೇದಾಗಮಗಳೇ ಮುಖ್ಯ ಪ್ರಮಾಣ ಗ್ರಂಥಗಳಾಗಿವೆ. ಶ್ರುತಿಯೆಂಬುದು ಜಗತ್ಕರ್ತನಾದ ಭಗವಂತನ ಆಜ್ಞಾರೂಪವಾದ ವಾಙ್ಮಯವು. ನಮ್ಮನ್ನು ಸೃಷ್ಟಿಸಿದ ದೇವರ ಆಜ್ಞೆಯನ್ನು ನಾವು ಎಂದೂ ಮೀರಬಾರದು.

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಂಚಿಃ ಪಾಲಕೋಹರಿಃ ।
ಸಂಹರ್ತಾ ಕಾಲರುದ್ರಾಖ್ಯಃ ಶಿವಸ್ಸಾಂಬಸ್ಸನಾತನಃ ॥

ಸರ್ವಸಾಕ್ಷಿಯಾದ ಈಶ್ವರಾಜ್ಞೆಯಿಂದಲೇ ಚತುರ್ಮುಖ ಬ್ರಹ್ಮನು ಜಗತ್ತನ್ನು ಸೃಷ್ಟಿಸಿದನು. ವಿಷ್ಣುವು ಆ ಜಗತ್ತನ್ನು ಪಾಲಿಸುವನು. ರುದ್ರನು ಸಂಹರಿಸುವನು. ಎಂಬ ಆಗಮೋಕ್ತಿಯಂತೆ ತ್ರಿಮೂರ್ತಿಗಳೇ ಈಶ್ವರಾಜ್ಞೆಯನ್ನು ಒಂದು ಕ್ಷಣವೂ ಬಿಡದಂತೆ ನಡೆಸುತ್ತಿರುವರೆಂದು ಹೇಳುವಲ್ಲಿ ಇನ್ನು ಅಲ್ಪಜ್ಞರಾದ ಮಾನವರು ಅಂಥ ಈಶ್ವರಾಜ್ಞೆಯನ್ನು ಮೀರಿ ನಡೆಯಬಹುದೇ ? ಆದ್ದರಿಂದ ವೇದಾಜ್ಞೆಯ.ಂಬುದು ರಾಜಾಜ್ಞೆಯಂತೆ ಬಹಳ ಬಲವತ್ತರವಾದುದು. ಲೋಕದಲ್ಲಿ ರಾಜನಾದವನು ತನ್ನ ರಾಜ್ಯದ ಪ್ರಜೆಗಳ ಕ್ಷೇಮಕ್ಕೋಸ್ಕರ ಒಂದು ಶಾಸನವನ್ನು ಮಾಡುತ್ತಾನೆ. ಆ ಶಾಸನವನ್ನು ಯಾರು ಅತಿಕ್ರಮಿಸಿ ನಡೆಯುವರೋ ಅವರಿಗೆ ತಕ್ಕ ಶಿಕ್ಷೆಯನ್ನು ವಿಧಿಸಲು ಒಂದೊಂದು ಭಾಗಗಳನ್ನು ನಿಯಮಿಸಿರುತ್ತಾನೆ. ಆ ಶಾಸನವನ್ನು ಎಲ್ಲರೂ ಪುರಸ್ಕರಿಸಲೇಬೇಕು.

ರಾಜಾಜ್ಞಾಭಂಗಕೃನ್ನೄಣಾಂ ಯಥಾದಂಡೋ ಭವಿಷ್ಯತಿ ।
ಶಿವಾಜ್ಞಾ ಭಂಗ ಕೃನ್ನೃಣಾಂ ದಂಡೋಹಿ ನರಕಸ್ತಥಾ ॥

ಎಂದು ವ್ಯಾಸಮಹರ್ಷಿಗಳು ಶ್ರುತಿರೂಪವಾದ ಭಗವಂತನಾಜ್ಞೆಯು ರಾಜಾಜ್ಞೆಯಂತೆ ಬಲವತ್ತರವಾದುದೆಂದು ಶಂಕರಸಂಹಿತೆಯಲ್ಲಿ ಉಲ್ಲೇಖಿಸಿದ್ದಾರೆ.

## ಬ್ರಹ್ಮಜ್ಞಾನಿಗಳಿಗೆ ಮುಕ್ತಿಯುಂಟಾಗುವುದಲ್ಲದೆ
## ನಾಗ್ಬ್ರಹ್ಮಿಗಳಿಗೆ ಉಂಟಾಗಲಾರದು



ತೋಡಿದ ಬಾವಿಗೆ ಜಲವೇ ಸಾಕ್ಷಿಯಾದಂತೆ ಜ್ಞಾನೋದಯಕ್ಕೆ ದುರ್ಮತಿ ದುರಾಚಾರಗಳಿಲ್ಲದಿರುವಿಕೆಯೇ ಸಾಕ್ಷಿ. ಸದಾಚಾರಸಂಪನ್ನತೆಯೇ ಜ್ಞಾನದ ಕುರುಹು. ಮತ್ತು ಶಾಸ್ತ್ರಜ್ಞಾನವುಳ್ಳವನೂ, ಪಾಪಾಚರಣೆಯಿಲ್ಲದವನೂ, ಆಶೆಯಿಂದ ಚಿತ್ತನೈರ್ಮಲ್ಯವಂ ಕೆಡಿಸಿಕೊಳ್ಳದವನೂ, ಯಾವಾತನೋ ಆತನೇ ಬ್ರಹ್ಮಜ್ಞಾನಿಯು. ಎಂದು ಶಾಸ್ತ್ರವು ಹೇಳುತ್ತದೆ.

ಶ್ರೀಮನ್ನಿಜಗುಣಶಿವಯೋಗಿಗಳಿಂದ—

**ಶ್ರೀಗುರುವಚನೋಪದೇಶವನಾಲಿಸಿದಾಗಳಹುದು ನರರಿಗೆ ಮುಕುತಿ ||ಪ||**

ಶ್ರೀಗುರುವಿನ ವಚನರೂಪವಾದ ಉಪದೇಶವನ್ನು ಮನಸ್ಸಿಟ್ಟು ಕೇಳಿ ಅದರಂತೆ ನಡೆದರೆ ಮನುಷ್ಯರಿಗೆ ಮೋಕ್ಷವಾಗುತ್ತದೆ. ||ಪ||

**ದುರಿತಕರ್ಮವನೊಲ್ಲದಿರು ಪುಣ್ಯವನೆಮಾಡು ।**
**ಹರನಡಿವಿಡಿ ಶಾಂತರೊಡನಾಡು ।**
**ಕರುಣವಿರಲಿ ಜೀವರೊಳು ನೀತಿವಿದನಾಗು ।**
**ಪೊರೆಪೊರ್ದಿದರನೆಂದು ಬೆಸಸುವ ||೧||**

ಪಾಪ (ಕೆಟ್ಟ) ಕೆಲಸಗಳನ್ನು ಮಾಡಬೇಡ, ಪುಣ್ಯ (ಒಳ್ಳೆಯ) ಕೆಲಸಗಳನ್ನೇ ಮಾಡು, ಶಿವನನ್ನು ಮರೆಹೋಗು, ಜ್ಞಾನಿಗಳ ಸಹವಾಸದಲ್ಲಿಯೇ ಇರು, ದುಃಖಿಗಳಲ್ಲಿ ಕರುಣೆಯನ್ನು ಇಡು, ಧರ್ಮದಿಂದ ನಡೆ, ನಂಬಿದವರನ್ನು ಕಾಪಾಡು. ||೧||

**ನಿಂದಿಸಿನುಡಿಯದಿರಾರನು ಮನಸಿಗೆ ।**
**ಬಂದಂತೆ ನಡೆಯದಿರಿಹದಲ್ಲಿ ।**
**ಕುಂದುವಡೆಯದಿರು ಕಾಮಾದಿಗಳನುಜಯಿ ।**
**ಸೆಂದುಕೈವಿಡಿದನುಗ್ರಹಿಸುವ ॥೨॥**

ಯಾರನ್ನೂ ದೂಷಿಸಬೇಡ, ಮನಸ್ಸಿಗೆ ಬಂದಂತೆ ನಡೆಯಬೇಡ, ಲೋಕದಲ್ಲಿ ಅಗೌರವವನ್ನು ಹೊಂದಬೇಡ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳನ್ನು ಬಿಡು. ॥೨॥

**ಭವಮಾಲೆಗಲಸು ಪುಸಿಯದಿರೆಡರುಬಂದು ।**
**ಕವಿಯಲಂಜದಿರು ಸಂಪದದೊಳು ।**
**ತವೆ ಮದವಳಿದಿರು ತತ್ತ್ವಸಂತತಿಯನು ।**
**ವಿವರಿಸಿನೋಡೆಂದು ತಿಳುಪುವ ॥೩॥**

ಹುಟ್ಟು ಸಾವುಗಳಿಗೆ ಹೆದರು, ಸುಳ್ಳನ್ನಾಡಬೇಡ, ಕಷ್ಟ ಬಂದಾಗ ಹೆದರಬೇಡ, ಸಂಪತ್ತುಬಂದಾಗ ವಿನಯವಿರಲಿ, ತತ್ತ್ವಗಳನ್ನು ವಿವರಿಸಿ ನಿನ್ನ ನಿಜವನ್ನು ತಿಳಿ. ॥೩॥

**ಬಳಸದಿರದ್ವೈತವನು ಬಾಹ್ಯದಲ್ಲಿ ನಿಂ ।**
**ನೊಳಗೇಕೋಭಾವನೆಯನೊಡಗೂಡು ।**
**ತಿಳಿದು ಸಮಯ ನಿಷ್ಠೆಗಲಿ ವೇದವಿಧಿಭಕ್ತಿ ।**
**ಗಳನಗಲದಿರೆಂದುಸುರುವ ॥೪॥**

ಎಲ್ಲವೂ ಒಂದೇ ಎಂದು ವ್ಯವಹಾರದಲ್ಲಿ ಆಚರಿಸಬೇಡ, ಎಲ್ಲವೂ ದೇವರೇ ಎಂಬುದು ಭಾವನೆಯಲ್ಲಿರಲಿ, ಮತಧರ್ಮವನ್ನು ಆಚರಿಸು, ವೇದವಿಧಿಗಳನ್ನೂ ದೈವಭಕ್ತಿಯನ್ನೂ ಬಿಡಬೇಡ. ॥೪॥

**ಆರುನಾನೆಂದು ವಿಚಾರಿಸು ವಿಷಮ ಸಂ ।**
**ಸಾರವಿದನು ಕನಸೆಂದರಿ ।**
**ಮಾರಮರ್ಧನ ಶಂಭುಲಿಂಗವನೊಲಿಸಿ ಗಂ ।**
**ಭೀರ ಸುಖದೊಳಿರೆಂದರಪುವ ॥೫॥**

'ನಾನು ಯಾರು' ಎಂದು ವಿಚಾರಮಾಡು, ದುಃಖಮಯ ವಾದ ಈ ಸಂಸಾರವು ಸ್ವಪ್ನವೆಂದು ತಿಳಿ. *ಈಶ್ವರನನ್ನು ಒಲಿಸಿ ನಿತ್ಯಾನಂದರೂಪವಾದ ಮೋಕ್ಷವನ್ನು ಪಡೆ. ||೫||

ಈ ಪ್ರಕಾರ ಉಪದೇಶಿಸಲ್ಪಟ್ಟದೆ. ಅಂದ ಬಳಿಕ ಉಪನಿಷತ್ತಿಕ್ಕೆ ಸಮಾನವಾದ ಇಂಥ ಪವಿತ್ರವಾಕ್ಯಗಳ ತಿರುಳನ್ನರಿಯದೆ, ವಿಚಾರ ಸಾಗರ, ಜ್ಞಾನಸಿಂಧು ಇತ್ಯಾದಿ ವೇದಾಂತಗ್ರಂಥಗಳನ್ನು ಅಲ್ಪಸ್ವಲ್ಪ ನೋಡಿಕೊಂಡು ಒಳ್ಳೇ ವೇದಾಂತ ಬಲ್ಲವರಂತೆ ನಟಿಸಿ, ಎಲ್ಲವೂ ಬ್ರಹ್ಮ ಸ್ವರೂಪವೆಂದು 'ಅಹಂ ಬ್ರಹ್ಮಾಸ್ಮಿ' ಅಂದರೆ ನಾನು ಬ್ರಹ್ಮವಾಗಿದ್ದೇನೆ. 'ತತ್ತ್ವಮಸಿ' ಅಂದರೆ ಆ ಪರಬ್ರಹ್ಮವೇ ನೀನಾಗಿದ್ದೀಯೆ ಮುಂತಾದ ವೇದಾಂತವಾಕ್ಯಗಳನ್ನು ಉಪದೇಶಮಾಡುತ್ತ, ತಾನುಮಾತ್ರ ತತ್ತ್ವ ದಂತೆ ನಡೆಯದೆ ಶಿಶ್ನೋದರಪರಾಯಣನಾಗಿ ಪರದ್ರವ್ಯವನ್ನು ಅಪಹರಿ ಸುತ್ತ, ಯಾವಾಗಲೂ ದುರ್ವಿಷಯಗಳಲ್ಲಿ ಮಗ್ನನಾಗಿ, ಸ್ವೇಚ್ಛಾ ಪ್ರಕಾರ ವರ್ತಿಸುತ್ತ ಬಾಯಿಬಡಕತನದಿಂದ ವೇದಾಂತಶಾಸ್ತ್ರವನ್ನು ಹೇಳಿದರೆ ಅದರಿಂದ ಆಗತಕ್ಕ ಫಲವೇನು? "ಕ್ರಿಯೆವೀಣ ವಾಚಾ ಲತಾ ವ್ಯರ್ಥ ಆಹೆ" ನಡತೆಯಿಲ್ಲದ ಬಾಯಿಬಡಕತನವು ನಿರುಪ ಯೋಗವೆಂದು ರಾಮದಾಸರು ತಮ್ಮ ದಾಸಬೋಧಗ್ರಂಥದಲ್ಲಿ ಹೇಳಿ ದ್ದಾರೆ. 'ಅಹಂಬ್ರಹ್ಮಾಸ್ಮಿ' ಎಂದು ನುಡಿಯುತ್ತ ಸುಮ್ಮನೆ ಕುಳಿತರೆ ಬ್ರಹ್ಮಸಾಕ್ಷಾತ್ಕಾರವಾಗಲಾರದು. ಕತ್ತಲ ಕೋಣೆಯಲ್ಲಿ ಕುಳಿತು ದೀಪವನ್ನು ಹಚ್ಚಿದರೆ ಬೆಳಕಾಗುವದು ಎಂದು ಬರಿದೆ ಬಡಬಡಿಸುತ್ತ

---

* ಸ್ವಪ್ನದಲ್ಲಿ ಜರಗುವ ಘಟನೆಗಳು ಆಭಾಸಮಾತ್ರವಾದರೂ ಆ ಘಟನೆಗಳ ಮೂಲಭೂತವಾದ ಆತ್ಮಗತ ಸಂಸ್ಕಾರಗಳು ಸುಳ್ಳಲ್ಲ. ಸಂಸ್ಕಾರಗಳಿಲ್ಲದಿದ್ದರೆ ಸ್ವಪ್ನಗಳೇ ಬೀಳುವುದಿಲ್ಲ. ಆದ್ದರಿಂದ ಸ್ವಪ್ನವು ಸುಳ್ಳಲ್ಲ. ಅದರಂತೆ ಭೌತಿಕ ಪದಾರ್ಥಗಳು ಕ್ಷಣಭಂಗುರವಾದರೂ ಮೂಲ ಪಂಚಭೂತಗಳು ಶಾಶ್ವತವಾದವು ಗಳು ಎಂದು ತಿಳಿಯಬೇಕು, ಇದೇ ಕನಸೆಂದರಿ ಎಂದ ನಿಜಗುಣರ ನಿಜವಾದ ಅಭಿಪ್ರಾಯ.

ಕುಳಿತರೆ ಕತ್ತಲೆಯು ಹೋಗಿ ಬೆಳಕಾಗಲಾರದು. ದೀಪವನ್ನು ಹಚ್ಚಿದರೆ ಮಾತ್ರ ಬೆಳಕಾಗುವದು. ಅದರಂತೆ ಬ್ರಹ್ಮಾನುಭವಿಗಳಿಂದ ಕೇಳಿ ಮನನಮಾಡಿಕೊಂಡು ಉಪಾಸನಾದ್ವಾರಾ ತದಾಕಾರಾಕಾರಿತಾಂತಃಕರಣವೃತ್ತಿಯುಳ್ಳವನಾದರೆ ಬ್ರಹ್ಮವಾಗುವನು. ಬರಿಬಾಯಿಮಾತಿನಿಂದಲ್ಲ. "ಕಲೌ ವೇದಾಂತಿನಃ ಸರ್ವೇ ಫಾಲ್ಗುಣೇ ಬಾಲಕಾ ಇವ" ಎಂದು ಯೋಗವಾಸಿಷ್ಠಕಾರರು 'ನಾನೇ ಬ್ರಹ್ಮ' ಎಂದು ಸುಮ್ಮನೆ ಗೊಣಗುಟ್ಟುತ್ತಿರುವ ಕಲಿಯುಗದ ಸರ್ವ ವೇದಾಂತಿಗಳನ್ನು ಹೋಳೀ ಹುಣ್ಣಿವೆಯ ಹುಡುಗರಿಗೆ ಹೋಲಿಸಿದ್ದಾರೆ. ಮತ್ತು 'ಬಾಯುಬಡಕರಿದ್ದಲ್ಲಿ ಜಿಡಾರವಸ್ತಿ ಮಾಡಬಾರದು.' ಎಂದು ಒಬ್ಬ ನೀತಿಕಾರನು ಕೂಡ ಹೇಳಿದ್ದಾನೆ. ಅಂದ ಬಳಿಕ ಇಂಥ ಬಾಯಿಬಡಕ ಜನರ ಮಾತುಗಳಿಗೆ ಮರುಳಾಗಿ ಅವರ ಅನುಕರಣಮಾಡುವ ಜನರು ಕಡು ಮೂರ್ಖರೇ ಸರಿ! ಈ ಪ್ರಕಾರ ಉಪದೇಶಮಾಡುವ ಜನರಿಗೆ ಮೋಸಗಾರರೆಂದೂ, ದುರಳವೇದಾಂತಿಗಳೆಂದೂ, ಠಕ್ಕಸಂಭಾವಿತರೆಂದೂ ಹೆಸರು. ಆ ಬ್ರಹ್ಮವೇ ನಾನೆಂಬ ಜ್ಞಾನವು ಎಷ್ಟೋಜನರಿಗಿರಬಹುದು. ಅವರೆಲ್ಲರೂ ಮುಕ್ತರಾದರೆ ಅವರಲ್ಲಿ ಸಂಸಾರಿಕ ಗುಣಗಳು ಕಾಣಿಸುವವೇಕೆ? ಇಂಥವರೇ ಜ್ಞಾನೋದಯವಾದ ಬಳಿಕ ಕರ್ಮವು ಬೇಕಿಲ್ಲವೆಂದು ವಾದಿಸುವರು. ಈ ತರದ ವಾದವು ಶಾಸ್ತ್ರಸಮ್ಮತವಲ್ಲ.

ಜ್ಞಾನೇನಾಚಾರಯುಕ್ತೇನ ಪ್ರಸೀದತಿ ಮಹೇಶ್ವರಃ ।
ತಸ್ಮಾದಾಚಾರವಾನ್ ಜ್ಞಾನೀಭವೇದಾ ದೇಹಪಾತನಂ ॥



ಪರಮೇಶ್ವರನು ಆಚಾರಯುಕ್ತವಾದ ಜ್ಞಾನದಿಂದಲೇ ಪ್ರಸನ್ನನಾಗುವನು. ಆದುದರಿಂದ ಜ್ಞಾನಿಯು ಸ್ಥೂಲಶರೀರವನ್ನು ಬಿಡುವವರೆಗೂ ಆಚಾರವುಳ್ಳವನಾಗಿರಲೇಬೇಕು. ಎಂದು ಶ್ರೀ ರೇಣುಕಾಚಾರ್ಯರು ಸಿದ್ಧಾಂತಶಿಖಾಮಣಿಯಲ್ಲಿ ಹೇಳಿದ್ದಾರೆ. ಎಲ್ಲವೂ ದೇವರೇ ಎಂಬುದು ಭಾವನೆಯಲ್ಲಿ ಇರಬೇಕೇ ಹೊರತು ವ್ಯವಹಾರದಲ್ಲಿ ಆಚರಿಸ

ಕೊಡದೆಂದು ಜ್ಞಾನಿಗಳು ಹೇಳುತ್ತಿದ್ದರೂ ಅದನ್ನು ಲಕ್ಷ್ಯಕ್ಕೆ ತರದ
ಅದ್ವೈತವನ್ನು ಹೊರಗೆ ಬಳಸುತ್ತ ವಧು-ವರರುಗಳಲ್ಲಿ ರೂಪ, ವಿದ್ಯಾ
ಅಧಿಕಾರ, ಧನ, ಭೂಮಿ ಇವುಗಳಲ್ಲಿ ಯಾವುದಾದರೊಂದು ವಿಶೇಷ
ವಾಗಿ ಇದ್ದರೆ ಸಾಕು, ತಮ್ಮ ಜಾತಿಯ ಹೊರತು ಬೇರೆ ಜಾತಿಯಲ್ಲಿ
ಶರೀರಸಂಬಂಧ ಬೆಳಿಸುವರು. ಸ್ವಚ್ಛತೆ ಇದ್ದರೆ ತೀರಿತೆಂದು ಪಂಕ್ತಿ
ಭೋಜನ ಮಾಡುವರು. ಹೀಗೆ ಮಾಡುವದು ಶಾಸ್ತ್ರವಿರೋಧವೂ
ಲೋಕವಿರೋಧವೂ ಆಗುವದು.

ಸ್ವಮಾರ್ಗಾಚಾರವರ್ತಿಭ್ಯಃ ಸ್ವಜಾತಿಭ್ಯಃ ಸದಾವ್ರತೀ |
ದದ್ಯಾತ್ತ್ಯೇಭ್ಯಃ ಸಮಾದದ್ಯಾತ್ ಕನ್ಯಾಂ ಕುಲಸಮುದ್ಭವಾಂ ||

ಶಿವವ್ರತವುಳ್ಳ ಶಿವಭಕ್ತರು ಯಾವಾಗಲೂ ಸ್ವಧರ್ಮಾಚಾರಶೀಲ
ರಾದ ತಮ್ಮ ತಮ್ಮ ಸಂಪ್ರದಾಯಾನುಗತ ಜಾತಿಯವರಲ್ಲಿಯೇ ಕನ್ಯೆ
ಯನ್ನು ಕೊಡುವುದನ್ನೂ ತರುವುದನ್ನೂ, ಮಾಡಿಕೊಳ್ಳಬೇಕು- ಲಿಂಗ
ಧಾರಿಗಳಾಗಿದ್ದರೂ ತಮ್ಮ ಜಾತಿಗೆ ಭಿನ್ನವಾದ ಜಾತಿಯವರಲ್ಲಿ ತರಲೂ
ಬಾರದು; ಕೊಡಲೂಬಾರದು; ಎಂದು ಭಾವವು. ಹೀಗೆ ಸಿದ್ಧಾಂತ
ಶಿಖಾಮಣಿಯೂ ಮತ್ತು :—

ಶಿವೋಕ್ತಾಂ ಜಾತಿಮರ್ಯಾದಾಂ ಯೋಽತೀತ್ಯ ಭುವಿವರ್ತತೇ |
ಸ ಚಂಡಾಲ ಇತಿಜ್ಞೇಯಸ್ಸರ್ವಕರ್ಮಬಹಿಷ್ಕೃತಃ |
ಇತಿ ವಚನಾವಗತಪ್ರತ್ಯವಾಯಬದ್ಧಾ ದೇಹಾಂತೇ ನರಕಯಾತನಾ
ಮನುಭವಂತೀತಿದಿಕ್ ||

ಈ ಪ್ರಕಾರವಾಗಿ ವಿಶೇಷ ಶಾಸ್ತ್ರದಿಂದ ಜಾತಿಯ ತಾರತಮ್ಯ
ವುಂಟೆಂದು ಸಿದ್ಧಮಾಡಿ ಅಂತ್ಯದಲ್ಲಿ ಇದನ್ನು ಮೀರುವವನು ಚಂಡಾಲ
ನಾಗುವನೆಂದೂ ದೇಹಾಂತ್ಯದಲ್ಲಿ ನರಕವನ್ನು ಹೊಂದುವನೆಂದೂ
ಡಂಗುರವನ್ನು ಸಾರಿರುತ್ತಾರೆ. ನಾಲ್ಕುವರ್ಣಗಳೂ, ಹದಿನೆಂಟು ಜಾತಿ
ಗಳೂ, ನೂರೊಂದು ಕುಲಗಳ ತಾರತಮ್ಯವುಂಟೆಂದೂ ಇವುಗಳನ್ನು
ಮೀರಿದ್ದಾದರೆ ಶಿವೋಕ್ತ ಆಗಮಗಳಿಗೆ ಭಂಗವನ್ನುಂಟುಮಾಡಿದಂತಾ

ಗುವದೆಂದೂ ವೀರಶೈವ ಸದಾಚಾರಸಂಗ್ರಹವೆಂಬ ಗ್ರಂಥವು ಸಾರು ತ್ತದೆ. ಮತ್ತು:—

ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।
ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕ ಕ್ರಿಯಾಃ ॥

ಯಾರು ಕುಲಗಳನ್ನು ಸಂಕರಗೊಳಿಸುವರೋ ಅಂಥ ಕುಲ ಘಾತಕಿಗಳಿಗೆ ನರಕವು ತಪ್ಪುವುದಿಲ್ಲ. ಅವರ ಪಿತೃಗಳು ಪಿಂಡೋದಕ ಕ್ರಿಯಾಶೂನ್ಯರಾಗಿ ಪಿತೃಲೋಕದಿಂದ ಪತಿತರಾಗುವರು. ಎಂದು ಕುಲಸಾಂಕರ್ಯವನ್ನು ಗೀತೆಯು ಬಹಳವಾಗಿ ಖಂಡಿಸಿರುತ್ತದೆ. ಆದುದ ರಿಂದ ಈ ಯಾವತ್ತೂ ಮಹತ್ವದ ವಿಷಯವನ್ನು ತಿಳಿದು ಲಕ್ಷದಲ್ಲಿಟ್ಟು ಕೊಂಡು ಪ್ರತಿಯೊಬ್ಬರೂ ವರ್ತಿಸಬೇಕು. ತತ್ತ್ವದಂತೆ ನಡೆಯ ದಿದ್ದರೆ ಅವನ ಜನ್ಮವು ವ್ಯರ್ಥವೇ ಸರಿ! ಠಕ್ಕ ವೇದಾಂತಿಗಳ ಬಗ್ಗೆ ಒಂದು ಇತಿಹಾಸವುಂಟು:—ಒಂದು ಊರಲ್ಲಿ ಒಬ್ಬ ಠಕ್ಕ ವೇದಾಂತಿ ಇದ್ದನು. ಅವನ ನುಡಿ ಒಂದು ರೀತಿಯಾಗಿತ್ತು. ನಡೆ ಒಂದು ರೀತಿ ಯಾಗಿತ್ತು. ಒಂದು ದಿನ ಅವನು ಊರ ಹೊರಗೆ ತಿರುಗಾಡಲಿಕ್ಕೆ ಹೋಗಿದ್ದನು. ಅಲ್ಲಿ ಆ ಊರ ಗೌಡನ ತೋಟವಿತ್ತು. ಅದರಲ್ಲಿ ಒಳ್ಳೇ ಉತ್ಕೃಷ್ಟವಾದ ಬದನೆಕಾಯಿಗಳಿದ್ದವು. ಅವುಗಳನ್ನು ಕಂಡು, ಅವನ ಬಾಯಿಯಲ್ಲಿ ನೀರು ಬರಹತ್ತಿದವು. ಅದರಿಂದ ಅವನು ಸುತ್ತ ಮುತ್ತ ನೋಡಿದನು; ಯಾರ ಸುಳಿವೂ ಇರಲಿಲ್ಲ. ಆಗ ಹೋದವನೇ ಗಡಿ ಬಿಡಿಯಿಂದ ಬದನೀಕಾಯಿಗಳನ್ನು ಚಟಚಟ ಹರಿಯುತ್ತ ಉಡಿಯಲ್ಲಿ ಹಾಕುವವನಾದನು. ಅದನ್ನು ಅಲ್ಲಿಯೇ ಮರೆಯಲ್ಲಿ ನಿಂತಿದ್ದ ತೋಟ ದವನು ನೋಡಿ, “ಏನು ವೇದಾಂತಿಗಳೇ, ಇದೆಯೋ ನಿಮ್ಮ ವೇದಾಂತ ಮಾರ್ಗವು? ನೀವೇ ಅಲ್ಲವೇ! ಎರಡನೆಯವರದನ್ನು ಕಣ್ಣೆತ್ತಿ ಸಹ ನೋಡಬಾರದೆಂದು ದಿನಾಲು ಹೇಳುತ್ತಿರುವವರು!” ಎಂದು ನುಡಿ ದನು. ವೇದಾಂತಿಯು ಅಷ್ಟಕ್ಕೆ ಸುಮ್ಮನಾಗದೆ ಓಹೋ, ಆ ಮಾತಿನ

ವಿಷಯದಲ್ಲಿ ಈಗ ವ್ಯತ್ಯಾಸವಾಗಿ ತೋರಿಬಂದಿರುವುದೇನಯ್ಯಾ ಗ್ರಾಮಾಧಿಕಾರಿ! ಎಲ್ಲವೂ ಬ್ರಹ್ಮಸ್ವರೂಪವೇ? ನಮಗೂ ನಿಮಗೂ ಭೇದವಿಲ್ಲ. ನೀವು ನಮ್ಮವರಾದ್ದರಿಂದ ಈ ಹೊಲವಾದರೂ ನಮ್ಮದೆಂದೇ ತಿಳಿದು, ಕಾಯಿಗಳನ್ನು ಹರಕೊಂಡೆನು! ಬ್ರಹ್ಮವಿಷಯವಾಗಿ ಈ ತರದ ತಿಳಿಗೇಡಿತನವು ನಿಮ್ಮಲ್ಲಿದ್ದೀತೆಂದು ನಮಗೆ ಗೊತ್ತಿದ್ದಿಲ್ಲ! ಎಂದು ತಿರುಗಿ ಗೌಡನ ಮೇಲೆಯೇ ಮಾತು ಹೊರಿಸಿದನು. ಆಗ ಗೌಡನು—ಇವನ ಠಕ್ಕ ವೇದಾಂತಮಾರ್ಗವನ್ನು ಬಿಡಿಸಲಿಕ್ಕೆ ಇದೇ ತಕ್ಕ ಸಮಯವೆಂದು ಯೋಚಿಸಿ, ಅವನನ್ನು ಒಂದು ಮರಕ್ಕೆ ಬಿಗಿದು, ಹುಣಿಸಿಯ ಬರಲುಗಳಿಂದ ಮನಬಂದಂತೆ ಬಡಿಯಹತ್ತಿದನು. ಆಗ ವೇದಾಂತಿಯು ಹಣ್ಣಾಗಿ, ಅಳುತ್ತ ಇದೇನಯ್ಯಾ! ಎನ್ನಲು ಗೌಡನು ‘ಸ್ವಾಮಿಾ, ಇದೂ ಬ್ರಹ್ಮಕಾರ್ಯವೇ! ತಾವು ದುಃಖಿಸುವುದೇಕೋ ನನಗೆ ತಿಳಿಯಲೊಲ್ಲದು!’ ಎಂದು ಹೇಳಿದನು, ಆಗ ವೇದಾಂತಿಯು ನಾಚಿ ಮನೆಗೆ ಹೊರಟುಹೋದನು. ಅಂದಿನಿಂದ ತನ್ನ ಸುಳ್ಳುವೇದಾಂತದ ಸೋಗನ್ನು ಬಿಟ್ಟುಬಿಟ್ಟನು. ಆದ್ದರಿಂದ ಎಲ್ಲ ಮಾನವರು ಇಂಥವರ ಸಂಗವನ್ನು ಮಾಡದೆ ನಿಜವಾದ ವೇದಾಂತಿಗಳಾಗಿ ಮೋಕ್ಷಸಾಮ್ರಾಜ್ಯವನ್ನು ಹೊಂದಬೇಕೆಂದು ಸೂಚಿಸುತ್ತೇವೆ.



# ಈಗಿನ ಕಲಿಕಾಲದ ಪರಿಸ್ಥಿತಿ

ಲೋಕದಲ್ಲಿ ಘೋರವಾದ ಯುದ್ಧ ಮತ್ತು ಕೋಮುವಾರು ಕಲಹ ನಡೆಯಲಿಕ್ಕೆ, ಮೇಲಿಂದ ಮೇಲೆ ಭೂಕಂಪ ಜ್ವಾಲಾಮುಖಿಗಳಾಗಲಿಕ್ಕೆ, ಕೋರ್ಟು-ಕಚೇರಿಗಳು ಹೆಚ್ಚಾಗಲಿಕ್ಕೆ, ಅತಿವೃಷ್ಟಿ-ಅನಾವೃಷ್ಟಿಯಾಗಲಿಕ್ಕೆ, ದುರ್ಭಿಕ್ಷವಾಗಲಿಕ್ಕೆ, ಸಾಂಕ್ರಾಮಿಕ ರೋಗಗಳು ಉತ್ಪನ್ನವಾಗಲಿಕ್ಕೆ, ಅಕ್ಕಿ-ಗೋಧಿ ಮುಂತಾದ ಆಹಾರ ಧಾನ್ಯಗಳು ಸಾಕಷ್ಟು ಬೆಳೆಯದಿರುವುದಕ್ಕೆ ಕಾರಣವೇನು? ನಮ್ಮಲ್ಲಿ ಅಧರ್ಮ, ಅನೀತಿ, ಅತ್ಯಾಚಾರ, ಅನ್ಯಾಯ, ಹಿಂಸಾ, ಅಸತ್ಯ ಮುಂತಾದ ಪಾಪ ಕೃತಿಗಳು ಹೆಚ್ಚಾದ್ದರಿಂದಲೇ ಈ ದುರವಸ್ಥೆಯು ನಮಗೆ ಪ್ರಾಪ್ತವಾಗಿರುವುದಲ್ಲದೆ, ಬೇರೊಂದು ಕಾರಣವಿಲ್ಲವೆಂದು ಶಾಸ್ತ್ರವು ಸಾರುತ್ತದೆ. ಮತ್ತು ತ್ರಿಕಾಲಜ್ಞಾನಿಗಳು ಸಹ ಹೇಳುತ್ತಾರೆ. ಇದೇ ವಿಷಯದಲ್ಲಿ ಒಬ್ಬ ಕವಿಯು—

ನಿರ್ವೀರ್ಯಾ ಪೃಥಿವೀ ನಿರೋಷಧಿರಸಾ ನೀಚಾ ಮಹತ್ವಂ ಗತಾಃ ।
ಭೂಪಾಲಾ ನಿಜಕರ್ಮಧರ್ಮರಹಿತಾ ವಿಪ್ರಾಃ ಕುಮಾರ್ಗೇರತಾಃ ॥
ಭಾರ್ಯಾಭರ್ತೃವಿರೋಧಿನೀ ಪರರತಾ ಪುತ್ರಾಪಿತೃದ್ವೇಷಿಣಃ ।
ಹಾಕಷ್ಟಂ ಖಲುವರ್ತತೇ ಕಲಿಯುಗೇ ಧನ್ಯಾ ನರಾಯೇಮೃತಾಃ ॥

ಪಾಪಮಯವಾದೀ ಕಲಿಯುಗದ ಪ್ರಾಬಲ್ಯದಿಂದ ಭೂದೇವಿಯು ಸತ್ವಶೂನ್ಯಳಾದಳು. ಗಿಡಮರಬಳ್ಳಿಗಳು ಒಣಗಲಾರಂಭಿಸಿದವು, ನೀಚರು ದೊಡ್ಡ ದೊಡ್ಡ ಸ್ಥಾನವನ್ನೇರಿದರು. ದುಷ್ಟಶಿಕ್ಷಕರಾದ ಮಹಾರಾಜರು ಧರ್ಮದಿಂದ ವಿಮುಖರಾದರು. ವೇದಶಾಸ್ತ್ರ ಪಾಠಕರಾದ ಬ್ರಾಹ್ಮಣರು ದುಷ್ಟಮಾರ್ಗವನ್ನು ಹಿಡಿದರು. ಹೆಂಡತಿಯು ಪರಪುರುಷಾಸಕ್ತಳಾಗಿ ಗಂಡನನ್ನು ದ್ವೇಷಿಸುವಳು. ಮಕ್ಕಳು ಕಲಿಕಾಲದ

ವಿದ್ಯೆಯನ್ನು ಕಲಿತು ತಂದೆ-ತಾಯಿಗಳನ್ನು ಹಿಂಸಿಸುವರು. ಹಾಯ್ ಹಾಯ್ ಬಹಳ ಕಷ್ಟಪರಂಪರೆಯೊದಗಿದಂತಾಯಿತು. ಆದುದರಿಂದ ಇಂಥ ವಿಷಮಕಾಲವನ್ನು ನೋಡುತ್ತ ಬದುಕಿರುವುದಕ್ಕಿಂತಲೂ ಮರಣ ಹೊಂದುವುದೇ ಲೇಸೆಂದು ಈ ಕಲಿಯುಗದ ಪ್ರಾಬಲ್ಯವನ್ನು ವರ್ಣಿಸಿರುವನು.

ಆದುದರಿಂದ ನಾವೆಲ್ಲರೂ ಧಾರ್ಮಿಕರೂ, ನೀತಿವಂತರೂ ಆಗದ ವಿನಾ ಪರಮಾತ್ಮನ ಕೃಪೆಯು ನಮಗೆ ಆಗದು. ಪರಮಾತ್ಮನ ಕೃಪೆ ಆಗದ ಹೊರತು ಸುಖಶಾಂತಿಗಳು ನಮಗೆ ಎಂದೂ ದೊರೆಯಲಾರವು. ಯಾವನು ನಮ್ಮ ದುಷ್ಕರ್ಮಕ್ಕೆ ಸರಿಯಾಗಿ ಪ್ರಾಯಶ್ಚಿತ್ತವನ್ನುಂಟು ಮಾಡುತ್ತಿರುವನೋ, ಅವನೇ (ಭಗವಂತನೇ) ನಮ್ಮೆಲ್ಲರ ದುಃಖವನ್ನು ಪರಾಭವಮಾಡಲು ಶಕ್ಯನಲ್ಲದೆ ಯಾವ ಸರಕಾರದವರಿಂದಾಗಲಿ, ಧನಿಕರಿಂದಾಗಲಿ ಶಕ್ಯವಿಲ್ಲ. ಶಕ್ಯವಿದೆ ಅನ್ನುವವರು ಕೈಕುಂಟನು ಗಿಡದ ಮೇಲಿನ ಹಣ್ಣನ್ನು ತೆಗೆದುಕೊಳ್ಳುತ್ತೇನೆಂದೂ, ಮಳಲಿನಲ್ಲಿ ತೈಲವನ್ನು ತೆಗೆಯುತ್ತೇನೆಂದೂ ಹೊರಟ ಮೂರ್ಖನಂತೆಯೂ, 'ಹುಚ್ಚು ಬಿಟ್ಟಿತು ತಲೆಗೆ ಸುತ್ತಲಿಕ್ಕೆ ವನಿಕೆ ತಾ' ಎಂಬ ಪಂಡಿತನಂತೆಯೂ ಹಾಸ್ಯಕ್ಕೆ ಕಾರಣರಾಗುವರು. 'ತೇನ ವಿನಾ ತೃಣಮಪಿ ನ ಚಲತಿ' ಎಂಬ ಶಾಸ್ತ್ರೋಕ್ತಿಯಂತೆ ಅವನ (ಪರಮಾತ್ಮನ) ಕೃಪೆಯಿಲ್ಲದೆ ಒಂದು ಹುಲ್ಲುಕಡ್ಡಿಯು ಸಹ ಅಲ್ಲಾಡುವುದಿಲ್ಲ. ಅಂದಬಳಿಕ ಸರ್ವಕ್ಕೂ ಅವನ ಕೃಪೆಯೇ ಮುಖ್ಯವೆಂದು ಎಲ್ಲರಿಗೂ ತಿಳಿದುಬರುವದು. ಹಿಂದಕ್ಕೆ ದೇವದಾನವಮಾನವರೆಲ್ಲರೂ ಸಹ ಪರಶಿವನ ಕೃಪೆಯಿಂದಲೇ ತಮ್ಮ ತಮ್ಮ ಇಷ್ಟಾರ್ಥವನ್ನು ಪಡೆದಿರುವರು. ಈಗಲೂ ಪಡೆಯುತ್ತಲಿದ್ದಾರೆ. ಇದಕ್ಕೆ ಎಷ್ಟೋ ದೃಷ್ಟಾಂತಗಳಿವೆ.

**ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥**

ಧರ್ಮಕ್ಕೆ ಎಂದು ಹ್ರಾಸವುಂಟಾಗುವುದೋ ಅಂದು ಈಶ್ವರನೇ ಒಂದೊಂದು ರೂಪದಿಂದ ಅವತರಿಸಿ ಭಾರತಮಾತೆಯ ಕೋಮಲವಾದ ಅಂಗದಲ್ಲಿ ಚುಚ್ಚಿಕೊಂಡಿರುವ ಅಧರ್ಮವೆಂಬ ಮುಳ್ಳುಗಳನ್ನು ಕಿತ್ತೊಗೆದು ಎಂದಿನಂತೆ ಭಾರತಾಂಬೆಯನ್ನು ಸಂತೋಷ ಪಡಿಸುತ್ತಾನೆಂಬ ಗೀತೋಕ್ತಿಯಂತೆ ಅನಿತರಸಾಧಾರಣ ಶಕ್ತಿಯುಳ್ಳ ದೈವೀಪುರುಷನು ಭಾರತಮಾತೆಯ ಗರ್ಭಾಂಬುಧಿಯಲ್ಲಿ ಹುಟ್ಟುವವರಿಗೂ ದೈವಭಕ್ತರು ಎಲೆಮರೆ ಕಾಯಿಯಂತೆ ಸಹಿಸಿಕೊಂಡಿರಬೇಕಾಗಿದೆ. ಇರಲಿ.



# ಪಕ್ಷಪಂಗಡಗಳೂ ದ್ವೇಷಾಸೂಯೆಗಳೂ

ಪ್ರತಿಯೊಂದು ಗ್ರಾಮದೊಳಗಾಗಲಿ, ಪಟ್ಟಣದೊಳಗಾಗಲಿ ಪಕ್ಷ ಪಂಗಡಗಳೂ, ದ್ವೇಷಾಸೂಯೆಗಳೂ ಇದ್ದೇ ಇರುತ್ತವೆ. ಹೀಗಿರುವುದರಿಂದ ತಮ್ಮ ಸಮಾಜದ ಹಿತವಾಗಲಿ, ಸಾರ್ವಜನಿಕರ ಹಿತವಾಗಲಿ ಒಂದೂ ಆಗುವುದಿಲ್ಲ. ಒಬ್ಬರು ಯಾವದಾದರೊಂದು ಒಳ್ಳೆಯ ಕಾರ್ಯವನ್ನು ಮಾಡಲಿಕ್ಕೆ ಪ್ರಯತ್ನಮಾಡಿದರೆ ಮತ್ತೊಬ್ಬರು ಆ ಕಾರ್ಯವನ್ನು ಕೆಡಿಸುವುದಕ್ಕೆ ಅಥವಾ ಅಡ್ಡಿಮಾಡುವುದಕ್ಕೆ ಕಟಪಟ ಮಾಡುತ್ತಾರೆ, ಹೀಗಾಗಿ ಅವರವರೊಳಗೆ ವ್ಯಾಜ್ಯ ನಡೆದು ರೆವಿನ್ಯೂ ಅಥವಾ ಸಿವಿಲ್ ಕೋರ್ಟಿಗೆ ಹೋಗಿ ನಿರರ್ಥಕ ವಿಶೇಷ ದುಡ್ಡನ್ನು ಹಾಳುಮಾಡಿಕೊಳ್ಳುತ್ತಾರೆ. ಹೀಗೆ ನಿರರ್ಥಕ ಹಾಳುಮಾಡುವ ದುಡ್ಡನ್ನು ತಮ್ಮ ಶರೀರ ಸುಖಕ್ಕಾಗಲಿ, ಸಮಾಜದ ಹಿತಕ್ಕಾಗಲಿ, ಸಾರ್ವಜನಿಕರ ಕಲ್ಯಾಣಕ್ಕಾಗಲಿ ಖರ್ಚುಮಾಡುವುದು ಒಳಿತಲ್ಲವೆ? ಪ್ರತಿಯೊಂದು ಗ್ರಾಮದವರಾಗಲಿ, ಪಟ್ಟಣದವರಾಗಲಿ ತಮ್ಮಲ್ಲಿಯ ದ್ವೇಷಾಸೂಯೆಗಳನ್ನೂ, ಪಕ್ಷಪಂಗಡಗಳನ್ನೂ, ಸ್ವಾರ್ಥತೆಯನ್ನೂ ಸಂಪೂರ್ಣ ಬಿಟ್ಟು ಎಲ್ಲರೂ ಸಹೋದರರಂತೆ ಒಕ್ಕಟ್ಟಾಗಿ ಒಮ್ಮನಸ್ಸಿನಿಂದ ಯಾರಿಗೂ ಕೆಡಕು ಆಗದಂತೆ ನಿಷ್ಪಕ್ಷಪಾತದಿಂದ ಧಾರ್ಮಿಕ, ಸಾಮಾಜಿಕ, ರಾಜಕೀಯ ಕೆಲಸಗಳನ್ನು ಮುಂದುವರೆದು ಮಾಡುತ್ತ ಬಂದರೆ ಅಸಾಧ್ಯವಾದ ಕಾರ್ಯವು ಸಹ ಸಾಧ್ಯವಾಗಿ ಎಲ್ಲರಿಗೂ ಹಿತವಾಗುವದು. ಮತ್ತು ಆ ಪಟ್ಟಣವಾಗಲಿ ಗ್ರಾಮವಾಗಲಿ ಒಳ್ಳೇ ಉನ್ನತ ಶಿಖರವನ್ನೇರುವದು. ಆದುದರಿಂದ ಪ್ರತಿಯೊಂದು ಗ್ರಾಮದವರೂ ಪಟ್ಟಣದವರೂ ಇದರಂತೆ ನಡೆಯಬೇಕೆಂದು ವಿನಯದಿಂದ ಸೂಚಿಸುತ್ತೇವೆ.

# ದೇವರು ಧನವನ್ನು ಕೊಟ್ಟ ಕಾಲಕ್ಕೆ ತನ್ನ ಹಿತಕ್ಕೂ, ಪರಹಿತಕ್ಕೂ ವಿನಿಯೋಗಿಸಬೇಕು ಮತ್ತು ಕೊಟ್ಟದ್ದೇ ತನಗಾಗುವದು

ದೇವರು ಶ್ರೀಮಂತಿಕೆಯನ್ನು ಕೊಟ್ಟಾಗ್ಗೆ ಆ ಧನವನ್ನು ತನ್ನ ಹಿತಕ್ಕೂ ಪರಹಿತಕ್ಕೂ ಉಪಯೋಗಿಸಬೇಕು. ಹಾಗೆ ಮಾಡದಿದ್ದಲ್ಲಿ ಆ ಧನವು ನಿರರ್ಥಕವು. ಇದರ ಬಗ್ಗೆ ಓರ್ವ ನೀತಿಕಾರನು :—

ತುಚ್ಛಗೆ ನೀಚಗೆ ಧನವತಿ ।
ಹೆಚ್ಚಿದೊಡೇ ನಾತ್ಮಭೋಗ ಪರಹಿತಕಿಲ್ಲಂ ।
ಬಚ್ಚಲನೀರ್ ಕದಡಿದೊಡೇಂ ।
ನಿಚ್ಚಳದಿಂ ತಿಳಿದೊಡೇನು ಚೂಡಾರತ್ನಾ ॥

ತಿರಸ್ಕಾರಬುದ್ಧಿಯುಳ್ಳ ನೀಚಮನುಷ್ಯನಿಗೆ ಧನವು ಹೆಚ್ಚಾದರೆ ತನ್ನ ಸುಖಕ್ಕೂ ಪರಹಿತಕ್ಕೂ ಆಗುವುದಿಲ್ಲ. ಬಚ್ಚಲ ನೀರು ರಾಡಿ ಆದರೇನು? ಸ್ವಚ್ಛವಾಗಿ ತಿಳಿದರೇನು? ಹೇಗೆ ನಿರರ್ಥಕವೋ ಹಾಗೆ ಅವನಲ್ಲಿ ದುಡ್ಡು ಇದ್ದರೂ ಅಷ್ಟೇ ಹೋದರೂ ಅಷ್ಟೇ, ಎಂದು ಹೇಳಿದ್ದಾನೆ.

ಸತ್ಕಾರ್ಯಕ್ಕೆ ಕೊಡುವುದೇ ತನಗಾಗುವುದಲ್ಲದೆ, ಕೃಪಣತನದಿಂದ ಗಳಿಸಿ ಕೂಡಿಟ್ಟದ್ದು ತನ್ನದು ಆಗಲಾರದು. ಇದಕ್ಕೆ ಸರ್ವಜ್ಞ ಕವಿಯು—

ಕೊಟ್ಟದ್ದು ತನ್ನದು ಇಟ್ಟದ್ದು ಪರರದು ।
ಕೊಟ್ಟದ್ದು ಕೆಟ್ಟಿತೆನಬೇಡ ಮುಂದಕ್ಕೆ ।
ಕಟ್ಟಿಟ್ಟ ಬುತ್ತಿ ಸರ್ವಜ್ಞ ॥

ಕೊಟ್ಟದ್ದು ತನಗಾಗುವದು, ಇಟ್ಟದ್ದು ಪರರಿಗಾಗುವದು, ಕೊಟ್ಟದ್ದು ಮಾತ್ರ ನಷ್ಟವೆಂದು ತಿಳಿಯಬೇಡ, ಮುಂದಿನ

ದಾರಿಯ ಬುತ್ತಿಯೆಂದು ತಿಳಿದು ಕೊಡು ಎಂದು ಹೇಳಿದ್ದಾನೆ. ಮತ್ತು ಮನುಷ್ಯನಿಗೆ ಎಷ್ಟು ಅನುಕೂಲತೆ ಇದ್ದರೇನು? ಅದನ್ನು ಅವನು ಪರಶಿವನ ಪ್ರೀತಿಗಾಗಿಯೂ, ಪರಹಿತಕ್ಕಾಗಿಯೂ ವಿನಿಯೋಗಿಸದಿದ್ದರೆ ಅದು ನಿಶ್ಚಯವಾಗಿಯೂ ಅವನದಾಗಲಾರದು. ಆದರೆ ನಾವು ಯಾವುದನ್ನು ಸದ್ವಿನಿಯೋಗ ಮಾಡುತ್ತೇವೆಯೋ ಅದೇ ನಮ್ಮದು. ಈ ವಿಷಯದಲ್ಲಿ ನೀತಿಕಾರರು ಹೇಳಿರುವ ಕೆಳಗಿನ ವಿಷಯವು ಬಹು ಯುಕ್ತಿಯುಕ್ತವಾಗಿರುವದು. ಅದೇನೆಂದರೆ :— ಲೋಭಿಯನ್ನು ಲೋಭಿಯೆಂದು ಸಂಬೋಧಿಸುವದು ತಪ್ಪು. ಏಕೆಂದರೆ ಹೊಟ್ಟೆಬಟ್ಟೆಗಳನ್ನು ಕಟ್ಟಿ ಕೃಪಣತನದಿಂದ ಕೂಡಿಟ್ಟದ್ದ ಹಣದಲ್ಲಿ ಒಂದು ಕಾಸನ್ನಾದರೂ ಸಾಯುವಾಗ ಅವನು ತೆಗೆದು ಕೊಂಡು ಹೋಗುವುದಿಲ್ಲ. ಹಣದ ಗಂಟನ್ನು ಸಿಕ್ಕವರ ಪಾಲಿಗೆ ಬಿಟ್ಟು ತಾನು ಮಾತ್ರ ಬರಿಗೈಯಿಂದಲೇ ಭಿಕಾರಿಯಂತೆ ಹೋಗುತ್ತಾನೆ. ಉದಾರಿಯಾದರೂ ಹಾಗಲ್ಲ. ಉದಾರಿಯನ್ನು ಉದಾರಿಯೆಂದೆನ್ನ ಕೂಡದು. ಅವನು ಪರಮ ಲೋಭಿಯು ಸಾಯುವಾಗ ಅವನು ಒಂದು ಕಾಸನ್ನೂ ಬಿಟ್ಟಿರುವುದಿಲ್ಲ. ತನ್ನ ಜೀವಿತಕಾಲದಲ್ಲಿಯೇ ತಾನು ಸಂಪಾದಿಸಿದ್ದನ್ನೆಲ್ಲಾ ಸದ್ವಿನಿಯೋಗಮಾಡಿ, ಅಪಾರವಾದ ಪುಣ್ಯವನ್ನು ಸಂಪಾದಿಸಿ ತಾನು ಸಾಯುವಾಗ ಪುಣ್ಯರೂಪದಲ್ಲಿರುವ ತನ್ನ ಹಣವನ್ನೆಲ್ಲಾ ತಾನೇ ತೆಗೆದುಕೊಂಡು ಹೋಗುವನು, ಪುಣ್ಯವೆಂಬುದು ಒಂದು ನೋಟು ಇದ್ದ ಹಾಗೆ ಅದು ಇಹಲೋಕದ ಖಜಾನೆಯಲ್ಲಿ ನಡೆಯದೆ ಹೋದರೂ ಪರಲೋಕದ ಖಜಾನೆಯೆಲ್ಲಾ ತನ್ಮಯ. ಆದುದರಿಂದ ಪರಲೋಕದ ಸುಖವನ್ನಪೇಕ್ಷಿಸತಕ್ಕವರು ಇಹಲೋಕದಲ್ಲಿ ಸತ್ಕಾರ್ಯಮಾಡಿ ತಮ್ಮ ಹಣಕ್ಕೆಲ್ಲಾ ಪುಣ್ಯರೂಪವಾದ ನೋಟನ್ನು ಮಾಡಿಟ್ಟುಕೊಳ್ಳಬೇಕು, ಎಷ್ಟು ಹಣಕ್ಕೆ ಪುಣ್ಯರೂಪವಾದ ನೋಟನ್ನು ಪಡೆಯುತ್ತೇವೆಯೋ ಅಷ್ಟುಮಾತ್ರ ನಮ್ಮದು.

ಮಿಕ್ಕದ್ದೇನೂ ನಮ್ಮದಲ್ಲ. ಪುಣ್ಯರೂಪವಾದ ನೋಟು ಶಿಥಿಲವಾಗುವುದಿಲ್ಲ. ಸುಡುವುದಿಲ್ಲ. ನೆನೆಯುವದಿಲ್ಲ. ಕಳ್ಳರಿಗೆ ಸಿಕ್ಕುವದಿಲ್ಲ. ಕಳೆದುಹೋಗುವದಿಲ್ಲ, ಎಂದು ಹೇಳಿರುವರು.

ಕೆಲವರು ದುಶ್ಚಟಗಳಿಗೆ ಬೇಕಾದಷ್ಟು ಖರ್ಚು ಮಾಡುತ್ತಾರೆ. ಸತ್ಕಾರ್ಯಕ್ಕೆ ಮಾತ್ರ ಬಹಳ ಅಡಚಣೆಯನ್ನು ತೋರಿಸುತ್ತಾರೆ. ದುಶ್ಚಟಗಳಿಗೆ ಖರ್ಚುಮಾಡುವುದರಿಂದ ಶರೀರ ಸಂಪತ್ತೂ, ಧನ ಸಂಪತ್ತೂ ನಾಶವಾಗುವುದಲ್ಲದೆ ಇಹಪರದಲ್ಲಿ ಅಪಕೀರ್ತಿಯನ್ನು ಹೊಂದಬೇಕಾಗುವದು. “ ಧರೆಯೋಳ್ ಕೊಟ್ಟಂಗೆ ಬಡತನಂ ಬಂದಪುದೆ ” ಎಂಬ ಮಹಾತ್ಮರ ಉಕ್ತಿಯಂತೆ ಲೋಕದಲ್ಲಿ ಸತ್ಕಾರ್ಯಕ್ಕೆ ಕೊಡುವವನಿಗೆ ಧನಸಂಪತ್ತೂ, ಶರೀರಸಂಪತ್ತೂ ವೃದ್ಧಿಯಾಗಿ ಇಹಪರದಲ್ಲಿ ಗೌರವಪ್ರತಿಷ್ಠೆಗಳನ್ನು ಹೊಂದಿ ಸುಖವಾಗಿ ಬಾಳುವನು.



# ಉಪಸಂಹಾರ

ಆದುದರಿಂದ ಶರೆ, ಸಿಂದಿ, ಚಹಾ, ಕಾಫಿ, ಚುಟ್ಟಾ, ಸಿಗರೇಟ್, ನಶ್ಯ, ವ್ಯಭಿಚಾರ ಮುಂತಾದ ದುಶ್ಚಟಗಳಿಗೆ ಖರ್ಚುಮಾಡುವವರು ಸಂಪೂರ್ಣ ಬಿಟ್ಟು ಇಲ್ಲವೆ ಅದರ ಖರ್ಚನ್ನು ಕಡಿಮೆಮಾಡಿ, ಅದರ ಉಳಿತಾಯವನ್ನು ಸತ್ಕಾರ್ಯಕ್ಕೆ ಕೊಟ್ಟು ತಮ್ಮ ಮತಧರ್ಮದಂತೆಯೂ, ರಾಜಧರ್ಮದಂತೆಯೂ ನಡೆದು ಇಹದಲ್ಲಿ ಕೀರ್ತಿಯನ್ನೂ ಪರದಲ್ಲಿ ಸದ್ಗತಿಯನ್ನೂ ಹೊಂದಬೇಕು.

ಹೊಲವೆಂದಮೇಲೆ ಪೈರಿನ ಸಂಗಡ ಕಳೆ ಹುಟ್ಟಿಕೊಳ್ಳುವುದು ನಿಜ. ಕೃಷಿಕನು ಪೈರನ್ನು ಉಳಿಸಿಕೊಂಡು ಕಳೆ ಹುಲ್ಲನ್ನು ಕಿತ್ತು ಬಿಸಾಡುವಂತೆ ಪ್ರಕೃತಿಮಯವಾದ ಅಂತಃಕರಣವೆಂದಮೇಲೆ ಸದ್ಗುಣಗಳ ಸಂಗಡ ಕೆಲವು ದುರ್ಗುಣಗಳೂ ಹುಟ್ಟಿಕೊಳ್ಳುವುದು ಸಹಜವೇ. ಮುಮುಕ್ಷುಗಳಾದವರು ಸದ್ಗುಣಗಳನ್ನು ಉಳಿಸಿಕೊಂಡು ದುರ್ಗುಣಗಳನ್ನು ಕಿತ್ತು ಬಿಸಾಡಬೇಕೆಂದು ಹೇಳಿ ನಮ್ಮಾ ಭಾಷಣವನ್ನು ವಿರಮಿಸುತ್ತೇವೆ.

**॥ ಜಯನಮಃ ಪಾರ್ವತೀ ಪತೇ ಹರಹರ ಮಹಾದೇವ ॥**

**॥ ಸರ್ವೇಜನಾ ಸ್ಸುಖಿನೋಭವಂತು ॥**

**ಇತಿ ಶಿವಂ ಭೂಯಾತ್**



# ವೀರಶೈವದರ್ಶನದಲ್ಲಿ
# ಜ್ಞಾನಕರ್ಮಸಮುಚ್ಚಯ ವಾದ



ನಮ್ಮ ಭರತಖಂಡದಲ್ಲಿ ಪ್ರಸಿದ್ಧಗಳಾದ ವೈದಿಕಮತಗಳಲ್ಲಿ ಕೆಲವು ಮತಗಳು ಕರ್ಮ ಪ್ರಧಾನಗಳಾಗಿಯೂ ಕೆಲವು ಮತಗಳು ಜ್ಞಾನಪ್ರಧಾನಗಳಾಗಿಯೂ ಕೆಲವು ಮತಗಳು ಕರ್ಮಜ್ಞಾನಗಳೆರಡರ ಪ್ರಾಧಾನ್ಯವುಳ್ಳವುಗಳಾಗಿಯೂ ಇರುವವು. ಮೀಮಾಂಸಕರು ಕರ್ಮ ದಿಂದಲೇ ಮುಕ್ತಿಯೆಂದೂ ಅದ್ವೈತಿಗಳು ಜ್ಞಾನದಿಂದಲೇ ಮುಕ್ತಿ ಯೆಂದೂ ವೀರಶೈವರು ಕರ್ಮ-ಜ್ಞಾನಗಳೆರಡರಿಂದ ಮುಕ್ತಿಯೆಂದೂ ಹೇಳುತ್ತಾರೆ. ಕರ್ಮವು ಪಶುಕರ್ಮವೆಂದೂ ಪತಿಕರ್ಮವೆಂದೂ ಎರಡು ವಿಧವಾಗಿರುವುದು. ಸ್ವರ್ಗಸಾಧನಗಳಾದ ಕರ್ಮಗಳಿಗೆ ಪಶುಕರ್ಮ ಗಳೆಂದೂ ಮುಕ್ತಿಸಾಧನಗಳಾದ ಕರ್ಮಗಳಿಗೆ ಪತಿಕರ್ಮಗಳೆಂದೂ ಶಾಸ್ತ್ರಸಿದ್ಧಾಂತ.

ವೀರಶೈವರು ಪಶುಕರ್ಮಗಳನ್ನು ದೂರೀಕರಿಸಿ ಕೇವಲ ಪತಿ ಕರ್ಮಗಳನ್ನೇ ಆಚರಿಸುತ್ತಾರೆ. ಕೇವಲ ಕರ್ಮದಿಂದ ಅಥವಾ ಕೇವಲ ಜ್ಞಾನದಿಂದ ಮೋಕ್ಷವುಲಭಿಸುವದಿಲ್ಲ. ಶಾಸ್ತ್ರವು ಕರ್ಮಕ್ಕೆ ಮೋಕ್ಷ ರೂಪವಾದ ಯಾವ ಫಲವನ್ನು ಹೇಳುವುದೋ ಅದೇ ಫಲವನ್ನು ಜ್ಞಾನಕ್ಕೂ ಹೇಳುವುದರಿಂದ ಕರ್ಮ-ಜ್ಞಾನಗಳಿಗೆ ವಿರೋಧವಿಲ್ಲ ವೆಂಬುದೇ ವೀರಶೈವರ ಮುಖ್ಯಾಭಿಪ್ರಾಯವು. ಜ್ಯೋತಿಷ್ಟೋಮಾದಿ ಕರ್ಮವು ಸ್ವರ್ಗರೂಪವಾದ ಫಲವನ್ನು ಕೊಡುವುದು. ಆದುದರಿಂದ ಆ ಜ್ಯೋತಿಷ್ಟೋಮಾದಿ ಪಶುಕರ್ಮಕ್ಕೂ ಜ್ಞಾನಕ್ಕೂ ವಿರೋಧವಿದೆ. ಆದರೆ ಪತಿಕರ್ಮವೆಂದೆನಿಸಿದ ಶಿವಧ್ಯಾನಪಾದೋದಕ ಪ್ರಸಾದಗ್ರಹ ಣಾದಿಗಳಿಗೆ ಮೋಕ್ಷರೂಪವಾದ ಫಲವು ಉಕ್ತವಾಗಿರುವುದರಿಂದ ಅವು

ಜ್ಞಾನಕ್ಕೆ ವಿರುದ್ಧಗಳಲ್ಲ. ಔಷಧವನ್ನು ತಲೆಗೆ ಲೇಪನಮಾಡದೆ ಔಷಧ ಜ್ಞಾನದಿಂದಲೇ ಶಿರೋವ್ಯಾಧಿಯು ಶಾಂತವಾಗದಂತೆಯೂ ಪಕ್ಷಿಯು ಹಾರಲು ಎರಡು ರೆಕ್ಕೆಗಳು ಆವಶ್ಯವಾಗಿ ಬೇಕಾಗುವಂತೆಯೂ ಭವ ರೋಗವು ತೊಲಗುವುದಕ್ಕೆ ಕರ್ಮಜ್ಞಾನಗಳೆರಡೂ ಬೇಕು. ಈ ಎರಡ ರಲ್ಲಿ ಯಾವ ಒಂದರಿಂದಲೂ ಭವರೋಗ ತೊಲಗುವುದಿಲ್ಲ. ಜ್ಞಾನವು ಕಣ್ಣುಳ್ಳ ಕುಂಟನಂತೆ ಇರುವುದು. ಕರ್ಮವು ಕಾಲುಳ್ಳ ಕುರುಡನಂತೆ ಇರುವುದು. ಕುರುಡನು ಕಾಲಿದ್ದರೂ ಕಣ್ಣಿಲ್ಲದುದರಿಂದ ವಿಪತ್ತನ್ನು ಪರಿಹರಿಸಿಕೊಳ್ಳಲಾರದೆ ನಾಶವನ್ನು ಹೊಂದುವನು; ಕುಂಟನು ಕಣ್ಣಿದ್ದರೂ ಕಾಲಿಲ್ಲದುದರಿಂದ ವಿಪತ್ತಿಗೀಡಾಗುವನು. ಕಣ್ಣಿದ್ದ ಕುಂಟನು ಕಾಲಿದ್ದ ಕುರುಡನು ಇಬ್ಬರೂ ಪರಸ್ಪರ ಸಹಾಯಕರಾದರೆ ತಮ್ಮ ವಿಪತ್ತನ್ನು ಪರಿಹರಿಸಿಕೊಳ್ಳುವರು. ಅದರಂತೆ ಕರ್ಮಜ್ಞಾನ ಗಳೆರಡರ ಸಹಾಯವುಳ್ಳವನೇ ಮುಕ್ತಿಯನ್ನು ಹೊಂದುವನು, ಕರ್ಮ ವಿಲ್ಲದ ಜ್ಞಾನವೂ, ಜ್ಞಾನವಿಲ್ಲದ ಕರ್ಮವೂ ಪ್ರಧಾನಗಳಲ್ಲ. ಎರಡೂ ಒಬ್ಬನಲ್ಲಿ ಸನ್ನಿಹಿತವಾಗುವುದರಿಂದಲೆ ಫಲವು ದೊರೆಯುವುದು.

ಅಂಧಪಂಗುವದನ್ಯೋನ್ಯ ಸಾಪೇಕ್ಷೇ ಜ್ಞಾನಕರ್ಮಣೀ ।
ಫಲೋತ್ಪತ್ತೌ ವಿರಕ್ತಸ್ತು ತಸ್ಮಾತ್ತದ್ದ್ವಯ ಮಾಚರೇತ್ ॥

ಎಂಬ ಸಿದ್ಧಾಂತಶಿಖಾಮಣಿಯ ಶ್ಲೋಕವು ಮೇಲಿನ ಅಭಿಪ್ರಾಯ ವನ್ನೇ ಸಮರ್ಥಿಸುತ್ತದೆ.

ವಿದ್ಯಾಂಚಾ ವಿದ್ಯಾಂಚಯಸ್ತದ್ವೇದೋಭಯಗ್‌ಸಃ ।
ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾ ಮೃತಮಶ್ನುತೇ ॥

(ಈಶೋಪನಿಷತ್)

ಅಂದರೆ ಮುಕ್ತಿಗೆ ಜ್ಞಾನಕರ್ಮಗಳೆರಡೂ ಕಾರಣವೆಂದು ತಿಳಿದು ಅವರೆಡನ್ನೂ ಯಾವನು ನಿರ್ವಹಿಸುವನೋ ಆತನು ಕರ್ಮ ದಿಂದ ಜನನಮರಣರೂಪವಾದ ಸಂಸಾರಸಾಗರವನ್ನು ದಾಂಟಿ ಆನಂದ

ಘನವಾದ ಶಿವತತ್ತ್ವವನ್ನು ಹೊಂದುವನು. ನೇತ್ರದಲ್ಲಿರುವ ಕಾಚಾದಿ ದೋಷಗಳು ಹೋಗುವವರೆಗೆ ಶಂಖವು ಶುಭ್ರಗುಣವುಳ್ಳದ್ದೆಂದು ಜ್ಞಾನ ವಿದ್ದರೂ ಶಂಖದಲ್ಲಿ ತೋರುವ ಪೀತವರ್ಣವು ನಷ್ಟವಾಗುವುದಿಲ್ಲ. ಅದರಂತೆ ಸತ್ಕರ್ಮಗಳಿಂದ ಅಂತಃಕರಣದ ದೋಷಗಳು ನಾಶಹೊಂದದ ವರೆಗೆ ಕೇವಲ ಆತ್ಮಜ್ಞಾನದಿಂದ ಅನರ್ಥನಿವೃತ್ತಿಪೂರ್ವಕ ಪರಮಾ ನಂದಪ್ರಾಪ್ತಿರೂಪವಾದ ಮೋಕ್ಷವು ಲಭಿಸುವುದಿಲ್ಲ.

**ಅಂಧಂ ತಮಃ ಪ್ರವಿಶಂತಿಯೇಽವಿದ್ಯಾ ಮುಪಾಸತೆ ।**
**ತತೋಭೂಯ ಇವತೇ ತಮೋಯ ಉ ವಿದ್ಯಾಯಾಗ್ ರತಾಃ ॥**
(ಈ.ಉ.)

ವಿದ್ಯೆಯೆಂದರೆ ಜ್ಞಾನವು, ಅವಿದ್ಯೆಯೆಂದರೆ ಕರ್ಮವು. ಲೋಕ ದಲ್ಲಿ ಯಾರು ಪರಮಾತ್ಮಸ್ವರೂಪಜ್ಞಾನವಿಲ್ಲದೆ ಕೇವಲ ಕರ್ಮಗಳನ್ನು ಆಚರಿಸುವರೋ, ಶಿವಲಿಂಗಪೂಜನ, ಶಿವಲಿಂಗಸ್ತೋತ್ರ, ಶಿವಲಿಂಗಾ ರ್ಪಣ, ಶಿವಲಿಂಗಪ್ರಸಾದಗ್ರಹಣ ಮೊದಲಾದ ಪರಮಾತ್ಮಸಂಬಂಧ ವಾದ ಕ್ರಿಯೆಗಳಿಲ್ಲದೆ ಯಾರು ಆತ್ಮೈಕ್ಯ ಜ್ಞಾನವೊಂದರಲ್ಲಿಯೇ ಆಸಕ್ತರಾಗಿರುವರೋ ಈ ಕರ್ಮೈಕಪರರಿಗೂ, ಜ್ಞಾನೈಕಪರರಿಗೂ ಸಂಸಾರಮಯವಾದ ದುಃಖ ತಪ್ಪುವುದಿಲ್ಲವೆಂದು ಈ ಮಂತ್ರದ ಅಭಿಪ್ರಾಯವು. ಸ್ಪಂದಪ್ರದೀಪಿಕೆಯಲ್ಲಿ ಕೇವಲ ತತ್ತ್ವಮಸ್ಯಾದಿ ವಾಕ್ಯಜನ್ಯ ಜ್ಞಾನದಿಂದಲೇ ಮುಕ್ತಿಯಾಗುವುದಾದರೆ ಜ್ಞಾನೋತ್ತರ ಕ್ಷಣದಲ್ಲಿಯೇ ಎಲ್ಲರೂ ಶಾರೀರ ಮಾನಸ ದುಃಖಗಳಿಂದ ಮುಕ್ತರಾಗ ಬೇಕಾದೀತು, ಎಂದು ಆಕ್ಷೇಪಿಸಲಾಗಿದೆ.

**ಅನ್ಯದಾಹುರ್ವಿದ್ಯಯಾಽನ್ಯದಾಹುರವಿದ್ಯಯಾ ।**
**ಇತಿ ಶುಶ್ರುಮ ಧೀರಾಣಾಂ ಯೇನ ಸ್ತದ್ವ್ಯಾಚಚಕ್ಷಿರೆ ॥**

ಜ್ಞಾನವಿಲ್ಲದ ಕರ್ಮಕ್ಕೆ ಮೋಕ್ಷರೂಪವಾದ ಫಲವಿಲ್ಲವು. ಕರ್ಮಶೂನ್ಯವಾದ ಜ್ಞಾನಕ್ಕೂ ಮೋಕ್ಷರೂಪವಾದ ಫಲವು ದೊರೆ ಯದು. ಕರ್ಮವಿಲ್ಲದ ಜ್ಞಾನದಿಂದ ದೇವತಾಲೋಕ ಅಥವಾ ಶರೀರ

ಧಾರಣರೂಪವಾದ ಫಲವು ದೊರೆಯುವದು. ಜ್ಞಾನಶೂನ್ಯವಾದ ಕರ್ಮದಿಂದ ಪಿತೃಲೋಕ ಅಥವಾ ನಿತ್ಯಾನಂದಕ್ಕೆ ವಿರುದ್ಧವಾದ ದುಃಖಮಯವಾದ ಭಯಂಕರವಾದ ಕ್ರಿಮಿಕೀಟಾದಿ ಜನ್ಮಗಳನ್ನು ಪಡೆಯುವರು. ಆದುದರಿಂದ ಜ್ಞಾನಕರ್ಮಗಳೆರಡರಲ್ಲಿಯೂ ಆಸಕ್ತಿಯುಳ್ಳವರಾಗಿ ನಿತ್ಯಾನಂದವನ್ನು ಪಡೆಯಬೇಕಲ್ಲದೆ ಒಂದೊಂದರಲ್ಲಿಯೇ ಆಸಕ್ತರಾಗಿ ಅನಿತ್ಯವಾದ ಲೋಕಾಂತರಗಳನ್ನಾಗಲಿ, ಶುನಕ, ಸೂಕರ, ಕ್ರಿಮಿಕೀಟಾದಿ ಹೀನಜನ್ಮಗಳನ್ನಾಗಲಿ ಪಡೆಯಕೂಡದೆಂಬುದೇ ಈ ಉಪನಿಷನ್ಮಂತ್ರದ ಮುಖ್ಯಾಶಯವು.

ಕರ್ಮದಿಂದ ಮುಕ್ತಿಯು ಲಭಿಸುವುದಿಲ್ಲವೆಂದು ಹೇಳುವ ಶ್ರುತಿವಾಕ್ಯಗಳೆಲ್ಲವೂ ಜ್ಯೋತಿಷ್ಟೋಮಾದಿ ಸ್ಥೂಲಕರ್ಮಗಳನ್ನು ನಿಷೇಧಿಸುವವೇ ಹೊರತು ಸೂಕ್ಷ್ಮಗಳಾದ ಪತಿಕರ್ಮಗಳನ್ನು ನಿಷೇಧಿಸುವುದಿಲ್ಲ. ವೀರಶೈವರಿಗೆ ಪತಿಕರ್ಮಗಳ ಹೊರತು ಪಶುಕರ್ಮಗಳಿಲ್ಲವೆಂದೂ ಪಶುಕರ್ಮಗಳನ್ನು ಅನೇಕ ಜನ್ಮಗಳಲ್ಲಿ ಆಚರಿಸಿದುದರಿಂದುಂಟಾದ ಪುಣ್ಯಪ್ರಭಾವದಿಂದಲೇ ವೀರಶೈವ ಜನ್ಮವು ಪ್ರಾಪ್ತವಾಗುವದೆಂದೂ ತಿಳಿಯಬೇಕು. ಇದಕ್ಕೆ

ಅನೇಕ ಜನ್ಮಶುದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಂ ।
ನರಾಣಾಂ ಕ್ಷೀಣಪಾಪಾನಾಂ ಶಿವೇ ಭಕ್ತಿಃ ಪ್ರಜಾಯತೆ ॥

ಮುಂತಾದ ಶ್ಲೋಕಗಳೇ ಪ್ರಮಾಣಗಳಾಗಿವೆ. ಪೂಜಾಕರ್ಮವು ಸಕಾಮವೆಂದೂ ನಿಷ್ಕಾಮವೆಂದೂ ಎರಡು ವಿಧ. ವೀರಶೈವರಿಗೆ ನಿಷ್ಕಾಮ ಕರ್ಮವೇ ಹೊರತು ಸಕಾಮ ಕರ್ಮವು ಯೋಗ್ಯವಲ್ಲ. ಫಲವು ಸಿಗಲಿ ಅಥವಾ ಸಿಗದೆ ಹೋಗಲಿ ಫಲಾಪೇಕ್ಷೆಯಿಲ್ಲದೆ ಸ್ವಕರ್ಮವನ್ನು ಆಚರಿಸಲೇಬೇಕು. ಇದೇ ವಿಷಯವನ್ನು

“ ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ”

ಎಂದು ಗೀತೆಯೂ,

ಜ್ಞಾನೇ ಸಿದ್ಧೇಽಪಿ ವಿದುಷಾಂ ಕರ್ಮಾಪಿ ವಿನಿಯುಜ್ಯತೆ ।
ಫಲಾಭಿಸಂಧಿರಹಿತಂ ತಸ್ಮಾತ್ಕರ್ಮ ನ ಸಂತ್ಯಜೇತ್ ॥

ಎಂದು ಸಿದ್ಧಾಂತಶಿಖಾಮಣಿಯೂ ಬೋಧಿಸುತ್ತವೆ. ಕೆಲವರು ಬ್ರಹ್ಮ ಜ್ಞಾನವುಂಟಾದ ಮೇಲೆ ಕರ್ಮಾಚರಣೆಯು ಯುಕ್ತವಲ್ಲವೆಂದು ಹೇಳುತ್ತಾರೆ. ವೀರಶೈವರು ಇದನ್ನು ಒಪ್ಪುವುದಿಲ್ಲ. ಏಕೆಂದರೆ ಸಿದ್ಧಾಂತ ಶಿಖಾಮಣಿಯಲ್ಲಿ—

ಜ್ಞಾನೇನಾಚಾರಯುಕ್ತೇನ ಪ್ರಸೀದತಿ ಮಹೇಶ್ವರಃ ।
ತಸ್ಮಾದಾಚಾರವಾನ್ ಜ್ಞಾನೀ ಭವೇದಾದೇಹಪಾತನಂ ॥

ಪರಮೇಶ್ವರನು ಆಚಾರಯುಕ್ತವಾದ ಜ್ಞಾನದಿಂದಲೇ ಪ್ರಸನ್ನನಾಗುವನು. ಆದುದರಿಂದ ಜ್ಞಾನಿಯು ಸ್ಥೂಲಶರೀರವನ್ನು ಬಿಡುವವರೆಗೂ ಆಚಾರವುಳ್ಳವನಾಗಿರಬೇಕೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿರುವುದು. ಇದೇ ತತ್ತ್ವವನ್ನು ಅವಲಂಬಿಸಿ ಲಿಂಗಾಂಗಿಗಳು ತಮ್ಮ ಶಿವ ಸಂಬಂಧವಾದ ಜ್ಞಾನ-ಕ್ರಿಯೆಗಳೆರಡನ್ನೂ ತಪ್ಪದೆ ನಡೆಯಿಸುತ್ತ ಪರ ಬ್ರಹ್ಮ ಪದವಾಚ್ಯವಾದ ಶಿವಲಿಂಗದಲ್ಲಿ ಸ್ವತಾದಾತ್ಮ್ಯಬುದ್ಧಿಯನ್ನಿಟ್ಟು ವರ್ತಿಸಿ ಶಿವಸ್ವರೂಪವನ್ನು ಪಡೆದು ಸಾಯುಜ್ಯಪದಭಾಗಿಗಳಾಗುತ್ತಾರೆ.

ಕೀಟೋಭ್ರಮರ ಯೋಗೇನ ಭ್ರಮರೋ ಭವತಿ ಧ್ರುವಂ ।
ಮಾನವಶ್ಶಿವಯೋಗೇನ ಶಿವೋ ಭವತಿ ಕೇವಲಂ ॥

ಸದಾ ಭ್ರಮರ ಚಿಂತನೆಯಲ್ಲಿರುವ ಕೀಟವು ಕೆಲವು ಕಾಲದಲ್ಲಿ ಕೀಟಾಕೃತಿಯನ್ನು ಬಿಟ್ಟು ಭ್ರಮರಾಕೃತಿಯನ್ನು ಹೊಂದುವಂತೆ ಮಾನವನು ಜ್ಞಾನ ಕರ್ಮಾತ್ಮಕವಾದ ಶಿವಯೋಗದಿಂದ ಶಿವಸ್ವರೂಪಿಯಾಗುವನು. ಈ ಶಿವಯೋಗದಿಂದ ಅಂಗ(ಜೀವ) ನಿಷ್ಠಗಳಾದ ಅಜ್ಞತ್ವಾದಿಗುಣಗಳು ನಷ್ಟವಾಗಿ ಲಿಂಗ(ಬ್ರಹ್ಮ) ಸಂಬಂಧವಾದ ಸರ್ವಜ್ಞತ್ವಾದಿ ಗುಣಗಳು ಉದಯಿಸುವವು. ದೀಪವು ಸ್ವಯಂ ಪ್ರಕಾಶಗುಣವುಳ್ಳದ್ದಾದರೂ ಅದರ ಮೇಲೆ ಒಂದು ಬುಟ್ಟಿಯನ್ನು ಮುಚ್ಚಿದರೆ ಅದರ ಪ್ರಕಾಶಗುಣವು

ಹೊರಬೀಳದೆ ಸುತ್ತಲೂ ಕತ್ತಲೆಯೇ ಮುಸುಕುವಂತೆ ದೇಹದೊಳಗಿನ ಆತ್ಮವು ಸ್ವಭಾವತಃ ಸರ್ವಜ್ಞತ್ವಾದಿ ಗುಣಗಳಿಂದ ಕೂಡಿದುದಾದರೂ ಮಾಯಾಮಯಗಳಾದ ತ್ರಿಮಲಗಳಿಂದ ಆಚ್ಛಾದಿತವಾಗಿ ಸ್ವಶಕ್ತಿಯ ಪ್ರಭಾವವನ್ನು ಕಳೆದುಕೊಂಡು ವಿರುದ್ಧಗಳಾದ ಕಿಂಚಿಜ್ಞತ್ವಾದಿ ಹೇಯ ಗುಣಗಳಿಗೆ ಆಶ್ರಯವಾಗಿ ತಾಪತ್ರಯಗಳಿಂದ ಬಂಧಿಸಲ್ಪಟ್ಟು ನಾನಾ ಯೋನಿಗಳಲ್ಲಿ ಜನ್ಮವೆತ್ತಿ ದುಃಖಪರಂಪರೆಯನ್ನು ಅನುಭವಿಸಬೇಕಾಗುವುದು. ಈ ದುಃಖವನ್ನೆಲ್ಲ ದೂರೀಕರಿಸಿ ಪ್ರಪಂಚವನ್ನು ಉದ್ಧರಿಸುವುದಕ್ಕಾಗಿಯೇ ಶ್ರೀಜಗದ್ಗುರು ಪಂಚಾಚಾರ್ಯರು ಶಿವಾಜ್ಞಾನುಸಾರವಾಗಿ ಶಿವಲಿಂಗಮುಖದಿಂದವತರಿಸಿ, ನಿಗಮಾಗಮಸಿದ್ಧವಾದ ವೀರಶೈವ ಸಿದ್ಧಾಂತವನ್ನು ನೆಲೆಗೊಳಿಸಿದರು.



# ನವವಿಧ ಭಕ್ತಿ



ಭಕ್ತಿಯನ್ನುಳಿದ ಕರ್ಮ, ಯೋಗ, ಜ್ಞಾನಗಳು ಉಪಾದೇಯುಗಳಲ್ಲ. ಯಾರಾದರೂ ಭಕ್ತಿಯನ್ನುಳಿದು ಕರ್ಮಾದಿಗಳನ್ನಾಚರಿಸಿದರೆ ಅವುಗಳಿಂದ ಯಾವ ಪ್ರಯೋಜನವೂ ಆಗಲಾರದು. ಮುಕ್ತಿಗಿಂತ ಭಕ್ತಿ(ಉಪಾಸ್ಯ ಉಪಾಸಕ ಭೇದಭಾವವನ್ನೊಳಕೊಂಡ ಪ್ರೇಮ ಯೋಗ) ಯೇ ಸ್ವಾರಸ್ಯಮುಯವಾದುದೆಂದು ಅನೇಕ ಅನುಭವಿಗಳು ಹೇಳಿದ್ದಾರೆ.

ಧರ್ಮಾದಿಪುರುಷಾರ್ಥಾಣಾಂ ಚತುರ್ಣಾಂ ಪರತಃ ಪರಾ ।
ಪಂಚಮಃ ಪುರುಷಾರ್ಥೋ ಹಿ ಭಕ್ತಿಶ್ಶೈವೀ ಸನಾತನೀ ॥

(ಅನುಭವಸೂತ್ರ)

ಈ ರೀತಿ ಭಕ್ತಿಯನ್ನು ಧರ್ಮ ಮೊದಲಾದ ಚತುರ್ವಿಧ ಪುರುಷಾರ್ಥಗಳಿಗಿಂತಲೂ ಅತ್ಯಂತ ಶ್ರೇಷ್ಠವಾದ ಐದನೆಯ ಪುರುಷಾರ್ಥವೆಂದು ಶಾಸ್ತ್ರಕಾರರು ಎತ್ತಿ ಹಿಡಿದಿದ್ದಾರೆ. ಭಕ್ತಿ ಚೈತನ್ಯದಿಂದೊಡಗೂಡಿದ ಕರ್ಮದಿಂದಲೂ ನಮ್ಮ ಅನೇಕ ಜನ ಶಿವಶರಣರು, ಹರಿದಾಸರು ಮುಕ್ತಿಯನ್ನು ಪಡೆದಿದ್ದಾರೆ. ಅವರ ಮಾರ್ಗವೇ ನಮ್ಮೆಲ್ಲರಿಗೆ ಅನುಸರಣೀಯವಾಗಿದೆ. ಲಿಂಗಧಾರಿಗಳು ಶಿವನನ್ನು ಅನನ್ಯಭಾವದಿಂದ ವೀರಭಕ್ತಿಯಿಂದ ಭಜಿಸುತ್ತಿರುವುದರಿಂದಲೇ ಇವರಿಗೆ 'ವೀರಶೈವ' ಎಂಬ ನಾಮವು ರೂಢವಾಗಿದೆ.

ಶ್ರವಣಂ ಕೀರ್ತನಂ ಶಂಭೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯ ಮಾತ್ಮ ನಿವೇದನಂ ॥

(ಸಿದ್ಧಾಂತಶಿಖಾಮಣಿ)

ಎಂಬಂತೆ ಭಕ್ತಿಯು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ ಎಂದು ಒಂಭತ್ತು ವಿಧವಾಗಿದೆ.

೧. ಶ್ರವಣ ಭಕ್ತಿ—ಲೌಕಿಕ ಕಥೆಗಳನ್ನು ಕೇಳದೆ ಶಿವನ, ಉಮಾಮಹೇಶ್ವರಾದಿ ಪಂಚವಿಂಶತಿ ಲೀಲಾ ಕಥೆಗಳನ್ನೂ ಶಿವತತ್ತ್ವದ ರಹಸ್ಯವನ್ನೂ ಆಸಕ್ತಿಯಿಂದ ಕೇಳುವುದು.

೨. ಕೀರ್ತನ ಭಕ್ತಿ—ಆನಂದ ಬಾಷ್ಪವು ಉಕ್ಕುತ್ತಿರಲು ಗದ್ಗದ ಸ್ವರದೊಡನೆ ಶಿವನ ನಾಮ, ಮಹಿಮೆಗಳನ್ನು ಹೊಗಳುವುದು.

೩. ಸ್ಮರಣ ಭಕ್ತಿ—ತನ್ನ ದೇಹೇಂದ್ರಿಯಗಳನ್ನೂ ಅವುಗಳ ವ್ಯಾಪಾರವನ್ನೂ ಮರೆತು ಸ್ಥಿರಮನಸ್ಸಿನಿಂದ ಅಂತರಂಗದಲ್ಲಿ ಶಿವ ಮೂರ್ತಿಯನ್ನು ಧ್ಯಾನಿಸುತ್ತಿರುವುದು.

೪.—ಪಾದಸೇವನ ಭಕ್ತಿ—ಹಸಿವು, ಬಾಯಾರಿಕೆ, ನಿದ್ರೆ ನೋವು ಗಳೊಂದನ್ನೂ ಲಕ್ಷಿಸದೆ ಶಿವನನ್ನು ಪಚರಿಸುವುದರಲ್ಲಿ ನಿರತನಾಗಿರು ವುದು.

೫. ಅರ್ಚನ ಭಕ್ತಿ—ಶಿವನನ್ನು ಬಾಹ್ಯಾಭ್ಯಂತರಗಳಲ್ಲಿ ಷೋಡ ಶೋಪಚಾರಗಳಿಂದ ಪೂಜಿಸುವುದು.

೬. ವಂದನ ಭಕ್ತಿ—ಶಿವಾನುಗ್ರಹಾರ್ಥವಾಗಿ "ಶರಣಾಗತ ನಾದ ನನ್ನನ್ನು ಕಾಪಾಡು, ಕಾಪಾಡು" ಎಂದು ಬೇಡುತ್ತ ಶಿವನ ಮುಂದೆ ಸಾಷ್ಟಾಂಗ ನಮಸ್ಕಾರ ಹಾಕುವುದು. (ಎದೆ, ಶಿರಸ್ಸು, ದೃಷ್ಟಿ, ಮನಸ್ಸು, ವಾಣಿ, ಕೈ, ಕಾಲು, ಮೊಳಕಾಲು ಇಂತಿಷ್ಟು ಅಂಗಗಳಿಂದ ಕೂಡಿದುದೇ ಸಾಷ್ಟಾಂಗ ನಮಸ್ಕಾರ).

೭. ದಾಸ್ಯ ಭಕ್ತಿ—ಭಯಭಕ್ತಿ ಪೂರ್ವಕವಾಗಿ ತ್ರಿಕರಣಗಳಿಂದ ಶ್ರೀ ಸಾಂಬಮೂರ್ತಿಯ ಚರಣ ಕಮಲವನ್ನು ಆರಾಧಿಸುವುದು.

೮. ಸಖ್ಯ ಭಕ್ತಿ—ಶಿವನಿಂದ ಹೇಳಲ್ಪಟ್ಟ ಶಿವಾಗಮಗಳ ವಿಧಿಗೆ ಅನುಸಾರವಾಗಿ ವರ್ತಿಸಿ, ಶಿವನ ಅನುಗ್ರಹಕ್ಕೆ ಪಾತ್ರನಾಗುವುದು.

೯. ಆತ್ಮನಿವೇದನ ಭಕ್ತಿ—ಶಿವನಿಗೆ ತನ್ನ ದೇಹ, ಅರ್ಥ, ಪ್ರಾಣಗಳನ್ನೆಲ್ಲ ಸಮರ್ಪಿಸುವುದು.

ಈ ನವವಿಧಾಂಗಗಳಿಂದ ಕೂಡಿದುದೇ ಪೂರ್ಣಭಕ್ತಿ. ಇವುಗಳಲ್ಲಿ ಯಾವ ಒಂದು ಅಂಗ ಕಡಿಮೆಯಾದರೂ ಭಕ್ತಿಯಲ್ಲಿ ನ್ಯೂನತೆಯುಂಟಾಗುವುದು. ಈ ಒಂಭತ್ತು ವಿಧವಾದ ಭಕ್ತಿಯುಳ್ಳವನೇ ಭಕ್ತ, ಅವನೇ ಪುಣ್ಯಪುರುಷ. ಪಾಪಿಗಳಿಗೆ ಕಲ್ಮಷಹೃದಯರಿಗೆ ಭಕ್ತಿಯು ದುರ್ಲಭವಾಗಿದೆ. ಪಕ್ವಾಂತಃಕರಣರಾದ ಪುಣ್ಯಶೀಲರು ಭಕ್ತಿಯನ್ನು ಶೀಘ್ರವಾಗಿ ಅಳವಡಿಸಿಕೊಳ್ಳಬಹುದು. ಅಂಕುರದಿಂದ ಬೀಜವು ಬೀಜದಿಂದ ಅಂಕುರವು ಹೇಗೆ ಉತ್ಪನ್ನವಾಗುವುದೋ ಹಾಗೆ ಭಕ್ತಿಯು ಶಿವಾನುಗ್ರಹದಿಂದ, ಶಿವಾನುಗ್ರಹವು ಭಕ್ತಿಯಿಂದ ಉತ್ಪನ್ನವಾಗುವುದು. ಸಿದ್ಧಾಂತ ಶಿಖಾಮಣಿಯಲ್ಲಿ—

ತಪಃ ಕರ್ಮ ಜಪೋಧ್ಯಾನಂ ಜ್ಞಾನಂ ಚೇತ್ಯನುಪೂರ್ವಕಂ ।

ಎಂದು ಭಗವಂತನ ಸೇವೆಯು ಪುನಃ ತಪಸ್ಸು, ಕರ್ಮ, ಜಪ, ಧ್ಯಾನ, ಜ್ಞಾನ ಎಂದು ಐದು ವಿಧವಾಗಿ ಹೇಳಲ್ಪಟ್ಟಿದೆ. ಶಿವನ ಮತ್ತು ಶಿವಸ್ವರೂಪವಾದ ಪ್ರಪಂಚದ ಸೇವೆಯಲ್ಲಿ ಶರೀರವನ್ನು ಸವೆಸುವುದೇ ತಪಸ್ಸಲ್ಲದೆ ಕೃಚ್ಛ್ರಚಾಂದ್ರಾಯಣಾದಿ ವ್ರತಾಚರಣೆಯಿಂದಾಗುವ ಶರೀರ ಶೋಷಣವು ತಪಸ್ಸಲ್ಲ. ಶಿವಪೂಜೆಯೇ ಕರ್ಮವಲ್ಲದೆ ಕಷ್ಟಸಾಧ್ಯವಾದ ಜ್ಯೋತಿಷ್ಟೋಮಾದಿ ಬಾಹ್ಯ ಯಾಗಗಳು ಕರ್ಮವಲ್ಲ. ಪಂಚಾಕ್ಷರಮಂತ್ರ, ಓಂಕಾರ, ಶ್ರೀರುದ್ರ, ಅಥರ್ವಶಿಖೆ, ಶ್ವೇತಾಶ್ವತರ, ಕೈವಲ್ಯಾದಿ ಶ್ರುತಿಗಳ ಅಭ್ಯಾಸವೇ ಜಪವಲ್ಲದೆ ಪಶುಕರ್ಮ (ಯಾಗ) ಪ್ರತಿಪಾದಕವಾದ ವೇದಭಾಗದ ಅಭ್ಯಾಸವು ಜಪವೆನಿಸುವುದಿಲ್ಲ. ಚಂದ್ರಶೇಖರತ್ವ, ಗಂಗಾಧರತ್ವಾದಿ ದಿವ್ಯಮಂಗಲಾಕಾರಾನುಸಂಧಾನವೇ ಧ್ಯಾನವಲ್ಲದೆ ಶರೀರೇಂದ್ರಿಯಾದ್ಯುಪಾಧಿಸಂಯುತವಾದ ಆತ್ಮನ ಧ್ಯಾನವು ಧ್ಯಾನವಲ್ಲ. ಶಿವಾಗಮಾರ್ಥಜ್ಞಾನವೇ ಜ್ಞಾನವಲ್ಲದೆ ಶಿವಾಗಮೇತರ ಸಾಂಖ್ಯಾದಿ ಶಾಸ್ತ್ರಜ್ಞಾನವು

ಜ್ಞಾನವಲ್ಲ.† ಹೀಗೆ ಶಿವಯಜ್ಞವು ಐದುಪ್ರಕಾರವಾಗಿ ಹೇಳಲ್ಪಟ್ಟಿದೆ. ಯಾವನು ಭಕ್ತಿಭಾವಭರಿತನಾಗಿ ಈ ಐದು ಶಿವಯಜ್ಞಗಳಿಂದ ಶಿವನನ್ನು ಆರಾಧಿಸುವನೋ ಅವನೆ ಭಕ್ತ. ಸಂಸಾರಿಕ ವಿಷಯಗಳಲ್ಲಿ ಯಾವಾಗಲೂ ಹರಿಯುತ್ತಿರುವ ಪ್ರೇಮಧಾರೆಯನ್ನು ಭಗವಂತನಲ್ಲಿ ಸ್ಥಿರಗೊಳಿಸಿದರೆ ಸಾಕು, ಅದೇ ಭಕ್ತಿ. ಭಕ್ತರಿಗೆ ಅಸಾಧ್ಯವಾದುದು ಜಗತ್ತಿನಲ್ಲಿ ಯಾವುದೂ ಇಲ್ಲ. ಇದಕ್ಕೆ ಉದಾಹರಣವಾಗಿ ಮಾರ್ಕಂಡೇಯನ ಚರಿತ್ರವನ್ನೇ ಕೊಳ್ಳಬಹುದು. ಭಕ್ತರು ಕಾಲ, ಕರ್ಮ, ಮಾಯೆಗಳನ್ನು ಸಹಜವಾಗಿ ಗೆಲ್ಲುತ್ತಾರೆ. ಇಂತಹ ನಿರ್ಮಲವಾದ ಭಕ್ತಿಸ್ವರೂಪವನ್ನು ಅರಿಯದೆ ಡಾಂಭಿಕತನದಿಂದ ಭಸ್ಮ ರುದ್ರಾಕ್ಷಿಗಳ ಬರಿಯ ವೇಷದಿಂದ ಸತ್ಪುರುಷರನ್ನು ವಂಚಿಸಿ ತಾವೇ ಭಕ್ತೋತ್ತಮರೆಂದೂ, ಜ್ಞಾನಿಗಳೆಂದೂ ತಮ್ಮಿಷ್ಟಕ್ಕೆ ತಾವೇ ತಿಳಿದುಕೊಂಡು ಸ್ವೇಚ್ಛಾಚಾರದಲ್ಲಿ ನಿರತರಾದವರು, ಲೋಕದಲ್ಲಿ ಅಗೌರವವನ್ನು ಹೊಂದುವರಲ್ಲದೆ ಶಿವಕೃಪೆಗೂ ದೂರಾಗುವರು.

ಸತಿಯುರಾದಡದೇನು ? ಸುತರಾಗಿ ಫಲವೇನು ?
ಶತಕೋಟಿ ಧನವ ಗಳಿಸೇನು ? ಭಕ್ತಿಯ
ಸ್ಥಿತಿಯಿಲ್ಲದನಕ ಸರ್ವಜ್ಞ

ಎಂದು ಸರ್ವಜ್ಞನು ಹೇಳಿದುದು ಅನುಭವಪೂರ್ಣವಾಗಿದೆ. ಭಕ್ತಿಯಿಲ್ಲದ ಕರ್ಮ, ಧರ್ಮ, ಧನ ಎಲ್ಲವೂ ವ್ಯರ್ಥ. ಭಕ್ತಿಯೊಂದಿಲ್ಲದಿದ್ದರೆ ಸದ್ಗುಣಗಳೆಲ್ಲ ಬತ್ತಿದ ಸರೋವರದಂತೆ ನಿರರ್ಥಕ. ಆದುದರಿಂದ ಭಕ್ತಿಯೋಗವನ್ನು ಸಾಧಿಸಿಕೊಂಡು ಸತ್ಕಾರ್ಯದಲ್ಲಿ ಮಗ್ನನಾಗುವುದೇ ಮಾನವನ ಕರ್ತವ್ಯವಾಗಬೇಕು.

॥ ಶ್ರೀ ಶಿವಃ ಶರಣಮ್ ॥

---

†ಇಲ್ಲಿ " ಜ್ಞಾನವಲ್ಲ "ವೆಂದುದರ ಅಭಿಪ್ರಾಯ ಸಾಂಖ್ಯಾದಿ ಶಾಸ್ತ್ರಜ್ಞಾನವು ಅಜ್ಞಾನ ಅಥವಾ ಕುಜ್ಞಾನವೆಂದು ಅಲ್ಲ, ವೀರಶೈವರು ಮುಕ್ತಿಸಾಧನವಾದ ಶಿವಾಗಮನಿಗಮಜ್ಞಾನದ ಹೊರತಾಗಿ ಇತರ ಸಾಂಖ್ಯಾದಿ ಶಾಸ್ತ್ರಗಳ ಜ್ಞಾನವನ್ನು ಅಂಗೀಕರಿಸಿಲ್ಲವೆಂಬುದು ಮುಖ್ಯ ತಾತ್ಪರ್ಯ. ಜ್ಯೋತಿಷ್ಟೋಮಾದಿ ಕರ್ಮಗಳು ಕರ್ಮವಲ್ಲವೆಂಬ ತಾತ್ಪರ್ಯವಾದರೂ ಇದೇ.

# ಪಾತಿವ್ರತ್ಯ

ನಮ್ಮ ಭಾರತದ ಮಹಿಳೆಯರಿಗೆ ಸರ್ವಧರ್ಮಗಳಲ್ಲಿ ಪಾತಿವ್ರತ್ಯ ಧರ್ಮವೆಂಬುದೊಂದೇ ಮುಖ್ಯ ಧರ್ಮವಾಗಿರುತ್ತದೆ. ಈ ಪಾತಿವ್ರತ್ಯ ವೆಂಬ ಧರ್ಮವನ್ನು ಯಾವ ಸ್ತ್ರೀಯಳು ತ್ರಿಕರಣಶುದ್ಧಿಯಿಂದ ಪಾಲಿ ಸುತ್ತಾಳೆಯೋ ಅವಳೇ ಕುಲಸ್ತ್ರೀಯಳೆನಿಸುತ್ತಾಳೆ. ಸ್ತ್ರೀಯರನ್ನು ಉನ್ನತಾವಸ್ಥೆಗೆ ತರುವ ಪತಿಧರ್ಮಪರಾಯಣತೆ ಎಂಬ ಧರ್ಮವು ಯಾವಳಲ್ಲಿ ಶೈಥಿಲ್ಯ ಹೊಂದಿರುವುದೋ ಅವಳಲ್ಲಿ ಇತರ ಧರ್ಮಗಳೆಷ್ಟಿ ದ್ದರೂ ಅವು ಪ್ರಕಾಶ ಹೊಂದಲಾರವು. ಈ ಪಾತಿವ್ರತ್ಯವೆಂಬ ಧರ್ಮ ಒಂದಿದ್ದು ಇತರ ಧರ್ಮಗಳಿಲ್ಲದಿದ್ದರೂ ಅವಳು ಸ್ತುತ್ಯಳೂ ಈಶ್ವರ ಪ್ರಿಯಳೂ ಆಗುತ್ತಾಳೆ. ಇನ್ನು ಸೌಶೀಲ್ಯಾದಿ ಇತರ ಧರ್ಮಗಳಿಂ ದೊಡಗೂಡಿದ ಈ ಪಾತಿವ್ರತ್ಯ ಧರ್ಮವಾದರೂ ನಕ್ಷತ್ರಮಾಲೆಯಿಂ ದೊಡಗೂಡಿದ ಚಂದ್ರನಂತೆ ಪರಿಶೋಭಿಸುವದು. ಲೋಕದಲ್ಲಿ ಪುರು ಷರು ಪರಿಶುದ್ಧಾತ್ಮರಾಗಿ ಅದ್ಭುತ ಶಕ್ತಿಯನ್ನು ಪಡೆಯಬೇಕಾದರೆ ಅನೇಕ ವಿಧವಾದ ಕರ್ಮೋಪಾಸನೆಯನ್ನೂ ಯಮನಿಯಮಾದಿ ತಪ ಸ್ಸನ್ನೂ ಮಾಡಬೇಕಾಗುತ್ತದೆ. ಸ್ತ್ರೀಯರು ಮಾತ್ರ ಇಂಥ ಕಠಿಣ ತರಗಳಾದ ಯಾವದೊಂದು ಉಪಾಸನೆಯನ್ನಾಗಲಿ, ಕೃಚ್ಛ್ರಚಾಂದ್ರಾ ಯಣಾದಿ ತಪಸ್ಸನ್ನಾಗಲಿ ಮಾಡಬೇಕಾಗಿಲ್ಲ. ಪತಿಯ ಗುಣಾವಗುಣ ಗಳನ್ನು ಅವಲೋಕಿಸದೆ ತ್ರಿಕರಣಶುದ್ಧಿಯಿಂದ ಪತಿಸೇವಾನಿರತಳಾಗಿ ತನ್ನ ಪಾತಿವ್ರತ್ಯವೆಂಬ ಅಮೋಘವಾದ ರತ್ನ ಒಂದನ್ನು ಪಾಲಿಸಿ ಕೊಂಡು ಬಂದರೆ ಸಾಕು. ಋಷಿಗಳು ಅನ್ನ ಆಹಾರಾದಿಗಳನ್ನು ತ್ಯಜಿಸಿ ಕೇವಲ ವಾಯ್ವಾಹಾರ ಜಲಾಹಾರಾದಿಗಳಲ್ಲಿದ್ದು ಮಹಾತಪಸ್ಸಿದ್ಧಿ ಯನ್ನು ಪಡೆಯುವಂತೆ ಪಾತಿವ್ರತ್ಯವೆಂಬ ಒಂದು ಮಹಾ ತಪಸ್ಸಿ

ನಿಂದಲೇ ಸ್ತ್ರೀಯರ ಹೃದಯದಲ್ಲಿ ಒಂದು ವಿಧವಾದ ಅದ್ಭುತ ಶಕ್ತಿಯು ಒಡಮೂಡುವದು. "ಸತಿಗೆ ಪಾತಿವ್ರತ್ಯವೇ ಭೂಷಣಂ" ಎಂಬ ನೀತಿ ವಾಕ್ಯದಂತೆ ಭಾರತ ಸ್ತ್ರೀಯರಿಗೆ ಪಾತಿವ್ರತ್ಯಕ್ಕಿಂತಲೂ ಇನ್ನೊಂದು ಶ್ರೇಷ್ಠ ಧರ್ಮವಿಲ್ಲವು. ಕುಲಸ್ತ್ರೀಯರಿಗೆ ಪಾತಿವ್ರತ್ಯವೇ ಅಮೋಘ ವಾದ ಆಭರಣವು. ಲೋಕದಲ್ಲಿ ಪಾತಿವ್ರತ್ಯಾನುಷ್ಠಾನಕ್ಕಿಂತಲೂ ಇನ್ನೊಂದು ಕ್ಲೇಶತರವಾದ ತಪಸ್ಸಿಲ್ಲ. ನಿಯಮಗಳಲ್ಲೆಲ್ಲಾ ಪಾತಿ ವ್ರತ್ಯ ನಿಯಮವೇ ಘನತರವಾದುದು. ಇಂಥ ಪತಿಧರ್ಮಪರಾಯಣೆ ಯರಾದ ಸ್ತ್ರೀಯರ ಹೃದಯದಲ್ಲಿ ಪತಿವ್ರತಾ ದೇವತೆಯಾದ ಪಾರ್ವ ತಿಯು ಸದಾ ಸನ್ನಿಹಿತಳಾಗಿ ಶಾಪಾನುಗ್ರಹ ಶಕ್ತಿಯನ್ನುಂಟುಮಾಡು ವಳು. ಇಹಪರ ಸುಖಸಾಧಕವಾದ ಇಂತಹ ಪಾತಿವ್ರತ್ಯವೆಂಬ ಧನ ವನ್ನು ಯಾವ ಸ್ತ್ರೀಯಳು ಕಳೆದುಕೊಳ್ಳುತ್ತಾಳೆಯೋ ಅಂತಹ ಸ್ತ್ರೀಯಳು ಶೂರ್ಪನಖಿ ಮುಂತಾದ ಮಹಾ ರಾಕ್ಷಸಿಯರಂತೆ ವಂಶ ಚ್ಛೇದಕಳಾಗುತ್ತಾಳೆ.

ಸ್ತ್ರೀಯರು ಯಾವಾಗ ದುಷ್ಟವೃತ್ತಿಯನ್ನು ಅವಲಂಬಿಸುತ್ತಾ ರೆಯೋ ಆಗ ವರ್ಣಾಶ್ರಮಧರ್ಮಗಳ ಸಾಂಕರ್ಯವಾಗಿ ಹಾಳುಬಿದ್ದ ಕ್ಷೇತ್ರದಂತೆ ಅವರ ಮಂಗಲಮಯವಾದ ಸೌಭಾಗ್ಯವೇ ನಷ್ಟವಾಗು ವದು ಎಂದು ಗೀತಾಕಾರರೂ ಸಹ ಹೇಳಿದ್ದಾರೆ.

ಲೋಕೇಷು ನಿರ್ಧನೋ ದುಃಖೀ ಋಣಗ್ರಸ್ತಸ್ತತೋಽಧಿಕಂ ।
ತಾಭ್ಯಾಂ ದುಃಖೀತು ರೋಗೀ ಚ ತೇಭ್ಯೋ ದುಃಖೀ ಕುಭಾರ್ಯಕಃ ॥

ನಮ್ಮ ಭಾರತಭೂಮಿಯು ಕರ್ಮಭೂಮಿಯೆಂದೆನಿಸಿಕೊಂಡಿದೆ. ಕರ್ಮಾಧಿಕಾರವೆಂಬುವದು ಸತೀಸಾನ್ನಿಧ್ಯವಿದ್ದವನಿಗಲ್ಲದೆ ಇತರರಿಗೆ ಸಂಪೂರ್ಣ ದೊರೆಯಲಾರದು. ಆದ್ದರಿಂದಲೇ ನಮ್ಮ ಹಿಂದಿನ ಋಷಿ ಗಳು ಸತಿಯರನ್ನು ಧರ್ಮಪತ್ನಿಯರೆಂದೇ ಕರೆದಿರುವುದರಿಂದ ನಮ್ಮ ಭಾರತ ಧರ್ಮಮಂದಿರವು ಪಾತಿವ್ರತ್ಯವೆಂಬ ತಳಹದಿಯಮೇಲೆ ನಿಂತಿರು

ತ್ತದೆಂದು ಹೇಳಿದರೆ ಅತಿಶಯೋಕ್ತಿಯೆನಿಸಲಾರದು. ತಳಹದಿಯು ಎಲ್ಲಿಯವರೆಗೆ ಭದ್ರವಾಗಿರುತ್ತದೆಯೋ ಅದುವರೆಗೂ ಮೇಲಣ ಕಟ್ಟಡವು ಅಂದವಾಗಿಯೇ ಇರುತ್ತದಲ್ಲವೆ ?

ರೋಗರುಜೆಗಳುಂಟಾದರೆ ಸಂಜೀವನೌಷಧಿಯಂತೆ ಅನುಕೂಲಳಾಗಿಯೂ, ವಿನೋದಕಾಲದಲ್ಲಿ ಸ್ನೇಹಿತಳಾಗಿಯೂ, ಯಜ್ಞ ಸಮಯದಲ್ಲಿ ಧರ್ಮಪತ್ನಿ ಸ್ವರೂಪಿಣಿಯಾಗಿಯೂ ಶತ್ರುಗಳು ಯುದ್ಧಕ್ಕೆ ಬಂದ ಸಮಯದಲ್ಲಿ ಖಡ್ಗಧಾರಿಣಿಯಾದ ಮಹಾವೀರಳಾಗಿಯೂ, ಗುರು-ದೇವರ ಪೂಜಾಸಮಯದಲ್ಲಿ ಭೃತ್ಯಳಾಗಿಯೂ. ವ್ಯಥೆಯುಂಟಾದ ಕಾಲದಲ್ಲಿ ಬಂಧುವಾಗಿಯೂ ಹೀಗೆ ಒಬ್ಬಳೇ ಅನಂತ ರೂಪವನ್ನು ಧರಿಸುತ್ತ ಪ್ರತಿಯೊಬ್ಬ ಸ್ತ್ರೀಯು ತನ್ನ ಪತಿಗೆ ಪ್ರತಿಯೊಂದು ಕಾರ್ಯದಲ್ಲಿ ಅನುಕೂಲಳಾಗಿ ವರ್ತಿಸಬೇಕು. ಹೀಗೆ ವರ್ತಿಸುವುದೇ ಕುಲಸ್ತ್ರೀಯರ ಮುಖ್ಯ ಲಕ್ಷಣ.

ಭೋಜರಾಜನಕಾಲದಲ್ಲಿ ಒಬ್ಬ ಬ್ರಾಹ್ಮಣನು ಪತಿವ್ರತಾಶಿರೋಮಣಿಯಾದ ತನ್ನ ಹೆಂಡತಿಯ ತೊಡೆಯಮೇಲೆ ನಿದ್ರೆಮಾಡುತ್ತಿರಲು ಆಕೆಯ ಶಿಶುವು ಮಧ್ಯರಾತ್ರಿಯಲ್ಲಿ ಎಚ್ಚರಗೊಂಡು ಸಮೀಪದಲ್ಲಿ ದಗದಗಿಸುತ್ತಿರುವ ಅಗ್ನಿಕುಂಡದ ಬಳಿಗೆ ಹೋಗಿ ಕುಂಡದಲ್ಲಿ ಬೀಳುತ್ತಿರುವುದನ್ನು ತಾಯಿಯು ನೋಡಿ ಎದ್ದು ಹೋಗಿ ಆ ಮಗುವನ್ನು ತೆಗೆದುಕೊಂಡು ಬರಬೇಕೆಂಬ ಇಚ್ಛೆಯಿದ್ದರೂ ಪತಿಗೆ ನಿದ್ರಾಭಂಗವುಂಟಾಗುವುದೆಂಬ ಭೀತಿಯಿಂದ ಪತಿಧರ್ಮಪರಾಯಣಳಾದ ಆ ಧರ್ಮಪತ್ನಿಯು ಮೇಲಕ್ಕೆದ್ದು ಹೋಗದೆ ಇಡ್ಡೆಡೆಯಲ್ಲಿಯೇ ಆ ಯಜ್ಞೇಶ್ವರನನ್ನು ಪ್ರಾರ್ಥಿಸಿದಳು. ಅಷ್ಟರಲ್ಲಿ ಆ ಮಗುವು ಬೆಂಕಿಯಲ್ಲಿ ಉರುಳಿತು. ಆದರೂ ಆಕೆಯ ಪಾತಿವ್ರತ್ಯಧರ್ಮಕ್ಕೆ ಯಜ್ಞೇಶ್ವರನು ಪ್ರಸನ್ನನಾಗಿ ತನ್ನ ಉಷ್ಣಭಾವವನ್ನು ಬಿಟ್ಟು ಶೀತಭಾವವನ್ನು ಅಂಗೀಕರಿಸಿದನು. ಮಗುವು ಸ್ವಲ್ಪವೂ ದುಃಖಗೊಳ್ಳದೆ ಹಸನ್ಮುಖವಾಗಿ ಯಜ್ಞಕುಂಡದಲ್ಲಿ

ಆಡುತ್ತಲೇ ಇತ್ತು. ಅಷ್ಟರಲ್ಲಿಯೇ ಪತಿಯು ಎಚ್ಚರಗೊಂಡನು. ಗಾಬರಿಯಿಂದ ಆಕೆಯು ಎದ್ದು ಹೋಗಿ ಮಗುವನ್ನು ಎತ್ತಿಕೊಂಡಳು. ನೋಡಿದಿರಾ ಪಾತಿವ್ರತ್ಯದ ಪ್ರಭಾವವನ್ನು?

ಪತಿಯು ಕುಂಟನಾಗಲಿ, ಕುರುಡನಾಗಲಿ, ಮೂಢನಾಗಲಿ, ಪಂಡಿತನಾಗಲಿ. ರೂಪಿಯಾಗಲಿ, ಕುರೂಪಿಯಾಗಲಿ ದೈವಾನುಸಾರ ವಾಗಿ ಬಂದ ತಮ್ಮ ಪತಿಸೇವೆಯಲ್ಲಿಯೇ ಆಸಕ್ತರಾಗುತ್ತ ಹಿಂದಣ ಸೀತಾ, ದ್ರೌಪದಿ, ದಮಯಂತಿ, ಸಾವಿತ್ರಿ, ಚಂದ್ರಮತಿ ಮುಂತಾದ ಮಹಾ ಪತಿವ್ರತಾಶಿರೋಮಣಿಗಳ ಮಧ್ಯದಲ್ಲಿ ಪರಿಗಣಿಸಲ್ಪಡುವುದೇ ನಮ್ಮ ಭಾರತದ ಕುಲಸ್ತ್ರೀಯರುಗಳ ಧರ್ಮವಾಗಿರುವುದಲ್ಲದೆ ಈಗಿನ ವಿದೇಶದ ಸಂಸರ್ಗದ ಗಾಳಿಗೆ ಮೈಯೊಡ್ಡಿ ಪಾತಿವ್ರತ್ಯಕ್ಕೆ ಭಂಗವನ್ನುಂಟುಮಾಡತಕ್ಕ ಪ್ರೌಢವಿವಾಹ, ವಿಧವಾ ವಿವಾಹ, ಸ್ತ್ರೀಸ್ವಾತಂತ್ರ್ಯ ಮೊದಲಾದವುಗಳಿಗೂ ಸದ್ಯಃ ಅಮಲಿನಲ್ಲಿ ತರಬೇಕೆಂದು ಆತುರಪಡುತ್ತಿರುವ ವಿವಾಹವಿಚ್ಛೇದನ ಮುಂತಾದ ಬಲೆಗಳಿಗೆ ಸಿಕ್ಕು ತಮ್ಮ ಅದ್ಭುತ ಶಕ್ತಿಯುಳ್ಳ ಪಾತಿವ್ರತ್ಯಕ್ಕೆ ಕುಂದನ್ನು ತಂದುಕೊಳ್ಳುವದು ಯಾರಿಗೂ ಭೂಷಣವಲ್ಲವು. ಕುಲಸ್ತ್ರೀಯರು ಪಾತಿವ್ರತ್ಯರಕ್ಷಣಾರ್ಥವಾಗಿ ಬೇಕಾದ ವಿದ್ಯೆಗಳನ್ನು ಕಲಿತು ಸಂಸಾರ ರಥವನ್ನು ನಡೆಸುವಷ್ಟು ಸ್ವಾತಂತ್ರ್ಯ ಪ್ರೇಮಿಗಳಾಗಿ ಆರ್ಯಧರ್ಮವನ್ನು ಕಾಪಾಡಬೇಕು. ಇಹಲೋಕ ಸುಖಕ್ಕೆ ಕಂಟಕವೂ, ಪರಲೋಕ ಸುಖಕ್ಕೆ ಪ್ರತಿಬಂಧಕವೂ, ನರಕಕ್ಕೆ ಹೇತುವೂ ಆದ ಸನಾತನ ಧರ್ಮವಿರುದ್ಧ ಕಾಯಿದೆಯನ್ನು ಪವಿತ್ರ ಭಾರತ ಮಹಿಳೆಯರೂ ಮತ್ತು ಪುರುಷರೂ ಒಪ್ಪುವುದಾದರೆ ಪುಷ್ಪವೆಂದು ಭ್ರಮಿಸಿ ದೀಪಕ್ಕೆರಗಿದ ಪತಂಗದಂತೆ ಶೀಘ್ರ ನಾಶೋನ್ಮುಖರಾಗುವಲ್ಲಿ ಸಂದೇಹವೇನೂ ಇರುವುದಿಲ್ಲ. ತಾವು ಮಾಡುವ ದೋಷವನ್ನೆಣಿಸದೆ ಸರ್ವಕಾರ್ಯಗಳಲ್ಲಿ ಯಾರಿಗೂ ಯಾವಾಗಲೂ ಆತಂಕಗಳನ್ನು ಮಾಡದ ಧರ್ಮಶಾಸ್ತ್ರವನ್ನು ಬದಿಗಿರಿಸಿ ತಮ್ಮ ಅಧಿಕಾರಬಲ

ಬುದ್ಧಿಬಲಗಳನ್ನು ಪವಿತ್ರವಾದ ಧರ್ಮದಮೇಲೆ ಉಪಯೋಗಿಸುತ್ತ ಸನಾತನ ಧರ್ಮವನ್ನು ಹಾಳುಮಾಡುವದು ರಾಷ್ಟ್ರದ ಮುಖಂಡರುಗಳಿಗೆ ತಿಲಮಾತ್ರವಾದರೂ ಯೋಗ್ಯವೆನಿಸಲಾರದು.

ದುರ್ಬಲವಾದ ವಸ್ತುವನ್ನು ನಾಶಮಾಡಬೇಕೆಂದು ಬಲವಾದ ವಸ್ತುವು ತನ್ನ ಅದ್ಭುತಶಕ್ತಿಯನ್ನು ಅದರ ಮೇಲೆ ಪ್ರಯೋಗಿಸಿದರೂ ಅದು ಎಂದೂ ನಾಶವಾಗಲಾರದು. ಉದಾಹರಣಾರ್ಥವಾಗಿ ಗರಿಕೆ (ಕರಿಕೆ) ಯು ಯಾವಾಗಲೂ ಅನೇಕ ಪ್ರಾಣಿಗಳ ತುಳಿತದಿಂದ ಪುಡಿಪುಡಿಯಾದರೂ, ಅಗ್ನಿ ಕಣಗಳಂತಿರುವ ಸೂರ್ಯನ ಕಿರಣಗಳಿಂದ ಬೆಂದುಹೋದರೂ, ಮೇಕೆ ಮೊದಲಾದವುಗಳಿಂದ ಯಾವಾಗಲೂ ತಿನ್ನಲ್ಪಟ್ಟರೂ, ಗುದ್ದಲಿಗಳಿಂದ ಅಗಿದು ಸ್ವಚ್ಛಮಾಡಲ್ಪಟ್ಟರೂ, ಕೃಶವಾದರೂ ಸಹ ಎಂದೂ ನಾಶವಾಗುವುದಿಲ್ಲ. ಏಕೆಂದರೆ ದುರ್ಬಲವಾದ ವಸ್ತುವಿನಲ್ಲಿ ಯಾವಾಗಲೂ ದೇವರ ದಯೆ ಇರುತ್ತದೆ. ದೇವಶಕ್ತಿಯ ಮುಂದೆ ಮಾನವ ಶಕ್ತಿಯು ಎಷ್ಟೂ ನಡೆಯಲಾರದು. ಇದನ್ನು ಸರ್ವರೂ ನೆನಪಿನಲ್ಲಿಡತಕ್ಕದ್ದು.

ಕಲಿಕಾಲದ ಮಹಿಮೆಯಿಂದ ಸನಾತನವಾದ ಹಿಂದೂಧರ್ಮಕ್ಕೆ ಅವನತಿಯು ಬರುತ್ತಿರುವುದೇನೋ ನಿಜ. ಆದರೂ ಸರ್ವೇಶ್ವರನ ಆಜ್ಞೆಯಂತೆ ಸ್ತ್ರೀಯರೆಲ್ಲರೂ ಮಹಾಬಲಯುತವಾದ ಪಾತಿವ್ರತ್ಯವನ್ನು ಕಾಯ್ದುಕೊಂಡು ಮುಂದೆ ಬರುತ್ತಿರುವ ಅಧರ್ಮದ ಕಾನೂನುಗಳನ್ನು ನಿಷೇಧಿಸಿ ಇಹಪರ ಸೌಖ್ಯವನ್ನು ಪಡೆಯಬೇಕೆಂದು ಆಗ್ರಹದಿಂದ ಸೂಚಿಸಬಯಸುತ್ತೇವೆ.



# ಸೂಕ್ತಿ-ಸುಧೆ

ಒಮ್ಮೆ ಕಾಶಿಯ ಮೌಲ್ವಿಗಳು ಅಯೋಧ್ಯೆಯ ನವಾಬನಾದ ವಾಜಿದ್ ಅಲಿಯ ಬಳಿಗೆ ಹೋಗಿ ಕಾಶಿಯ ಹಿಂದುಗಳು ಸೊಕ್ಕಿಗೆ ಬಂದಿದ್ದಾರೆಂದೂ ಹಿಂದೂಧರ್ಮವು ಊರ್ಜಿತ ಸ್ಥಿತಿಯಲ್ಲಿರುವುದರಿಂದ ಇಸ್ಲಾಮ್ ಧರ್ಮವು ಸಂಕಟಗ್ರಸ್ತವಾಗಿದೆಯೆಂದೂ ಆದುದರಿಂದ ಈ ಕೂಡಲೆ ತಾವು ಕಾಶಿಯ ಮೇಲೆ ದಾಳಿಮಾಡಿ ಹಿಂದುಗಳ ಸೊಕ್ಕನ್ನು ಮುರಿಯುವುದಲ್ಲದೆ ಅವರ ದೇವ ಮಂದಿರಗಳನ್ನು ಕೆಡವಿ ಅವುಗಳ ಸ್ಥಾನದಲ್ಲಿ ಮಸೀದೆ ಕಟ್ಟಿಸಬೇಕೆಂದೂ ಮನವಿ ಮಾಡಿಕೊಂಡರು. ಆದರೆ ಭಗವದ್ಭಕ್ತನಾದ ವಾಜಿದ್ ಅಲಿಯ ಮೇಲೆ ಅವರ ಮನವಿಯು ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ. ಆತನು ಕೂಡಲೆ ಕವಿತಾ ರೂಪವಾಗಿ ಉತ್ತರಿಸಿದ.

ಹಮ ಬಂದ ಏ ಇಷ್ಕ ಹೈಂ ನ ಮಜ ಹಬಸೆ ವಾಕಿಫ್ ಕಾಬಾ
ಹುವಾ ತೋ ಕ್ಯಾ? ಬುತಖಾನಾ ಹುವಾ ತೋ ಕ್ಯಾ?

ನಾನಂತು ಭಗವತ್ಪ್ರೇಮದ ಪೂಜಾರಿ. ನಿಮ್ಮ ಧರ್ಮವೇನೋ ನಾನರಿಯೆ. ಕಾಬಾ (ಮುಸಲ್ಮಾನರ ಪುಣ್ಯಕ್ಷೇತ್ರ) ಆದರೇನು? ಕಲ್ಲುದೇವರ ಗುಡಿ ಯಾದರೇನು? ನನಗೆ ಎಲ್ಲವೂ ಒಂದೆ.

(ಭಾ. ಸಿ. ಪುಟ ೩೯)

**ವಿವೇಕಭ್ರಷ್ಟಾನಾಂ ಭವತಿ ವಿನಿಪಾತಃ ಶತಮುಖಃ**

**(ಭರ್ತೃಹರಿ)**

ಮನುಷ್ಯನು ಒಮ್ಮೆ ವಿವೇಕವನ್ನು ಕಳೆದುಕೊಂಡು ಸನ್ಮಾರ್ಗ ವನ್ನು ಬಿಟ್ಟನೆಂದರೆ ಮೇಲೆ ಮೇಲೆ ನೂರಾರು ಪಾಪಗಳನ್ನು ಮಾಡಿ ಪತಿತನಾಗುತ್ತಾನೆ.

ಉ:—ಗಂಗೆಯು ಶಿವನ ಜಡೆಯನ್ನು ಬಿಟ್ಟು ಸ್ವರ್ಗಕ್ಕೂ ಸ್ವರ್ಗದಿಂದ ಹಿಮಾಲಯದ ಶಿಖರದ ಮೇಲೂ ಅಲ್ಲಿಂದ ತಪ್ಪಲ ಪ್ರದೇ ಶಕ್ಕೂ ಮತ್ತೆ ಅಲ್ಲಿಂದ ಭೂತಳಕ್ಕೂ ಬಿದ್ದು ಕಡೆಗೆ ಉಪ್ಪುಪ್ಪಾದ ಸಮುದ್ರಕ್ಕೆ ಸೇರುತ್ತದೆ.

**(ಭಾ. ಸಿ. ಸಂ. ೬)**



ಶ್ರೀ ಕಾಶೀವಿಶ್ವನಾಥಲಿಂಗದಿಂದ
ಶ್ರೀ ಜಗದ್ಗುರು ವಿಶ್ವಾರಾಧ್ಯರ ಅವತಾರವು.

# ಶ್ರೀಜಗದ್ಗುರು ವಿಶ್ವಾರಾಧ್ಯಾಷ್ಟೋತ್ತರ ಶತನಾಮಾವಲಿಃ



ವಿಶ್ವೇಶಲಿಂಗ ಸಂಭೂತಂ ವಿಶ್ವಕಲ್ಯಾಣ ಕಾರಣಂ ।
ವಿಶ್ವಕರ್ಣಾಭಿಧಂ ವಂದೇ ವಿಶ್ವಾರಾಧ್ಯಂ ಜಗದ್ಗುರುಮ್ ॥

ಓಂ ವಿಶ್ವಾರಾಧ್ಯಾಯ ನಮಃ
ಓಂ ವಿಭವೇ ನಮಃ
ಓಂ ವಂದ್ಯಾಯ ನಮಃ
ಓಂ ವಿಶ್ವನಾಥಾಯ ನಮಃ
ಓಂ ವಿಚಕ್ಷಣಾಯ ನಮಃ
ಓಂ ವಿಶ್ವವಿದ್ಯಾಯ ನಮಃ
ಓಂ ವಿಶುದ್ಧಾತ್ಮನೇ ನಮಃ
ಓಂ ವಿಶ್ವಕರ್ಣಾಯ ನಮಃ
ಓಂ ವಿಧಿಸ್ತುತಾಯ ನಮಃ
ಓಂ ವಿಶ್ವೇಶಜಾಯ ನಮಃ (೧೦)
ಓಂ ವಿಶಾಲಾಕ್ಷಾಯ ನಮಃ
ಓಂ ವಿಶ್ವಕರ್ತ್ರೇ ನಮಃ
ಓಂ ಜಗದ್ಗುರವೇ ನಮಃ
ಓಂ ಸ್ಕಂದಗೋತ್ರಪತಯೇನಮಃ
ಓಂ ಬಿಲ್ವನೇ ನಮಃ
ಓಂ ಸ್ಪಂದಜ್ಞಾಯ ನಮಃ
ಓಂ ಸುಮುಖಾಯ ನಮಃ
ಓಂ ಶಮಿನೇ ನಮಃ
ಓಂ ಕೃಶಾನ್ವಕ್ಷಾಯ ನಮಃ
ಓಂ ಕೃಪಾಪೂರಾಯ ನಮಃ(೨೦)
ಓಂ ಈಶಾನೋತ್ಥಾಯ ನಮಃ
ಓಂ ಶಿವಾಯ ನಮಃ

ಓಂ ಗುರವೇ ನಮಃ
ಓಂ ಕುಲೀನೇಷ್ಟಾಯ ನಮಃ
ಓಂ ಗುರುಪ್ರಷ್ಠಾಯ ನಮಃ
ಓಂ ಅಚಲಶಕ್ತಯೇ ನಮಃ
ಓಂ ಫಲಪ್ರದಾಯ ನಮಃ
ಓಂ ವೀತರಾಗಾಯ ನಮಃ
ಓಂ ವಿರಕ್ತೇಡ್ಯಾಯ ನಮಃ
ಓಂ ಪೀತಕಂಥಾಯ ನಮಃ(೩೦)
ಓಂ ಪ್ರಿಯಾಗಮಾಯ ನಮಃ
ಓಂ ಜಂಗಮೇಂದ್ರಾಯ ನಮಃ
ಓಂ ಜಗನ್ನಾಥಾಯ ನಮಃ
ಓಂ ಮಂಗಲಾಂಗಾಯ ನಮಃ
ಓಂ ಮಹಾಗುರವೇ ನಮಃ
ಓಂ ಜ್ಞಾನಪೀಠೇಶ್ವರಾಯ ನಮಃ
ಓಂ ಮುಕ್ತಾಯ ನಮಃ
ಓಂ ಜ್ಞಾನಿನೇ ನಮಃ
ಓಂ ಮಾಹೇಶ್ವರಾಯ ನಮಃ
ಓಂ ಅದ್ಭುತಾಯ ನಮಃ (೪೦)
ಓಂ ಪಂಚವರ್ಣಕವಯೇ ನಮಃ
ಓಂ ಭವ್ಯಾಯ ನಮಃ
ಓಂ ಕಾಂಚನಾಭಾಯ ನಮಃ
ಓಂ ಕಲಾಧರಾಯ ನಮಃ

ಓಂ ಪರಿಪೂರ್ಣಾಯ ನಮಃ
ಓಂ ಪರಬ್ರಹ್ಮಣೇ ನಮಃ
ಓಂ ಹರಿಕೇಶವನಾಲಯಾಯ ನಮಃ
ಓಂ ಸಾರಸ್ವತಾಗ್ರಣ್ಯೇ ನಮಃ
ಓಂ ಸೋಮಾಯ ನಮಃ
ಓಂ ಧೀರಾಯ ನಮಃ
ಓಂ ಭಕ್ತಸುರದ್ರುಮಾಯ ನಮಃ
ಓಂ ವಾರಣಸೀಗುರವೇ ನಮಃ
ಓಂ ಮುಖ್ಯಾಯ ನಮಃ
ಓಂ ವೀರಶೈವಪ್ರವರ್ತಕಾಯ ನಮಃ
ಓಂ ಆಕಾಶತತ್ತ್ವಾಯ ನಮಃ
ಓಂ ಓಂಕಾರಾಯ ನಮಃ
ಓಂ ಸಾಕಾರಾಯ ನಮಃ
ಓಂ ಶಿವಭೂಸುರಾಯ ನಮಃ
ಓಂ ಪ್ರಪಂಚಸತ್ಯತಾವಾದಿನೇ ನಮಃ
ಓಂ ಪ್ರಸ್ಥಾನತ್ರಯಭಾಷ್ಯಕೃತೇ ನಮಃ (೬೦)
ಓಂ ಶಿವಸೂತ್ರಾನುಸಂಧಾತ್ರೇ ನಮಃ
ಓಂ ಶಿವಾದ್ವೈತವಿಧಾಯಕಾಯ ನಮಃ
ಓಂ ಕಾಶೀರಾಜಾರ್ಚಿತಾಯ ನಮಃ
ಓಂ ದಿವ್ಯಾಯ ನಮಃ
ಓಂ ಪಶುಪಾಶಚ್ಛಿದೇ ನಮಃ
ಓಂ ಉನ್ನತಾಯ ನಮಃ
ಓಂ ಯಕಾರಬೀಜಾಯ ನಮಃ
ಓಂ ಸರ್ವಾತ್ಮನೇ ನಮಃ
ಓಂ ಸಕಲೇಶಾಯ ನಮಃ
ಓಂ ಸನಾತನಾಯ ನಮಃ (೭೦)
ಓಂ ವರ್ಣಾಶ್ರಮಪ್ರಭವೇ ನಮಃ
ಓಂ ವೇತ್ರೇ ನಮಃ
ಓಂ ಪೂರ್ಣಮೂರ್ತಯೇ ನಮಃ
ಓಂ ಪರೋಹಿತಾಯ ನಮಃ
ಓಂ ಪುಷ್ಕಲಾಯ ನಮಃ
ಓಂ ವಿಭುದಾಯ ನಮಃ
ಓಂ ಲಿಂಗಿನೇ ನಮಃ
ಓಂ ನಿಷ್ಕರ್ಷಾಯ ನಮಃ
ಓಂ ನಿಧನಾಯ ನಮಃ
ಓಂ ಯತಯೇ ನಮಃ (೮೦)
ಓಂ ಸುಂದರಾಯ ನಮಃ
ಓಂ ಬಂಧುರಾಯ ನಮಃ
ಓಂ ಶೂರಾಯ ನಮಃ
ಓಂ ನಂದಿವಾಹಾಯ ನಮಃ
ಓಂ ನತಾಮರಾಯ ನಮಃ
ಓಂ ವರೇಣ್ಯಾಯ ನಮಃ
ಓಂ ವಸುಧಾಮಾನ್ಯಾಯ ನಮಃ
ಓಂ ವರದಾಯ ನಮಃ
ಓಂ ವತ್ಸಲಾಯ ನಮಃ
ಓಂ ವಶಿನೇ ನಮಃ (೯೦)
ಓಂ ತ್ರಿಲೋಕೇಡ್ಯಾಯ ನಮಃ
ಓಂ ತ್ರಿಕಾಲಜ್ಞಾಯ ನಮಃ
ಓಂ ತ್ರಿಲಿಂಗಾಯ ನಮಃ
ಓಂ ಲಿಂಗದಾಯ ನಮಃ
ಓಂ ಅವ್ಯಯಾಯ ನಮಃ

ಓಂ ದೀಕ್ಷಾಗುರವೇ ನಮಃ
ಓಂ ಪ್ರದೀಪ್ತಾಂಗಾಯ ನಮಃ
ಓಂ ಮೋಕ್ಷದಾಯ ನಮಃ
ಓಂ ಅಂತರ್ಮುಖಾಯ ನಮಃ
ಓಂ ಮುನಯೇ ನಮಃ (೧೦೦)
ಓಂ ವಸಿಷ್ಠಬೋಧಕಾಯ ನಮಃ
ಓಂ ವರ್ಣಿನೇ ನಮಃ

ಓಂ ಶಾಸಕಾಯ ನಮಃ
ಓಂ ಧರ್ಮಪಾಲಕಾಯ ನಮಃ
ಓಂ ಭಾವಲಿಂಗಾಯ ನಮಃ
ಓಂ ಪರಂಜ್ಯೋತಿಷೇ ನಮಃ
ಓಂ ಪಾವನಾಯ ನಮಃ
ಓಂ ಪ್ರಮಥಾಧಿಪಾಯ ನಮಃ
(೧೦೮)

**ಶ್ರೀಜಗದ್ಗುರು ವಿಶ್ವಾರಾಧ್ಯಾಷ್ಟೋತ್ತರಶತನಾಮಾವಲಿಃ ಸಂಪೂರ್ಣಂ**



# ಶ್ರೀ ವಿಶ್ವಾರಾಧ್ಯಾಷ್ಟಕಂ



ವಿಶ್ವೇಶಾಮಲಲಿಂಗಗರ್ಭಜನನಂ ವಿದ್ವನ್ನುತಾಂಘ್ರಿದ್ವಯಂ ।
ಶಶ್ವತ್ಸ್ಥಾಪಿತವೀರಶೈವಸಮಯಂ ಶಾಸ್ತ್ರೋತ್ತಮಾಂಭೋನಿಧಿಂ ॥
ವಿಶ್ವಾಮಿತ್ರವಸಿಷ್ಠನಂದಿತಕಥಂ ವಿಜ್ಞಾನಸೂರ್ಯೋದಯಂ ।
ವಿಶ್ವಾರಾಧ್ಯಜಗದ್ಗುರುಂ ಭಜತ ಭೋ ! ವಿದ್ಯಾಪ್ರಭುತ್ವಪ್ರದಂ ॥೧॥

ಮೀಮಾಂಸಾದ್ವಯಸೂರ್ಯಚಂದ್ರನಯನಂ ಮಿಥ್ಯಾತ್ವಮೇಘಾನಿಲಂ ।
ಸಾಮಾಥರ್ವಋಗಧ್ವರಶ್ರುತಿಮತಂ ಸಾಕ್ಷಾತ್ಪಶೂನಾಂಪತಿಂ ॥
ಸೀಮಾತೀತಶಿವಾಗಮಾವಲಲಸತ್ ಸಿದ್ಧಾಂತಬುದ್ಧಾಖಿಲಂ ।
ವಿಶ್ವಾರಾಧ್ಯಜಗದ್ಗುರುಂ ಭಜತ ಭೋ ! ವಿದ್ಯಾಪ್ರಭುತ್ವಪ್ರದಂ ॥೨॥

ಕಾಮಾದಿದ್ವಿಪಕುಂಭಭಂಜನಹರಿಂ ಕಾಮಪ್ರದಾಗ್ರೇಸರಂ ।
ರಾಮಾದಿಪ್ರಭುಪೂಜತಾಂಘ್ರಿಯುಗಲಂ ರಾಜೀವರಾಜಾನನಂ ॥
ಧಾಮಾಂಗೀಕೃತಕಾಶಿಕಾಪುರವರಂ ಧನ್ಯೀಕೃತಾತ್ಮೋದಯಂ !
ವಿಶ್ವಾರಾಧ್ಯಜಗದ್ಗುರುಂ ಭಜತ ಭೋ ! ವಿದ್ಯಾಪ್ರಭುತ್ವಪ್ರದಂ ॥೩॥

ಶ್ರೀಮತ್ಸಿದ್ಧಸುರಾಸುರೇಂದ್ರನಿಕರ–ಕ್ಷೇಮಂಕರಂಶಂಕರಂ ।
ಪ್ರಾಮಾಣ್ಯಾಖಿಲವೇದಶಾಸ್ತ್ರಘಟನಾ–ಪದ್ಮಾಕರಂ ಮಾತರಂ ॥
ಭೂಮೀಮಂಡಲವೀರಶೈವಜನತಾ—ಬೋಧೋನ್ನತಂ ಸನ್ನತಂ ।
ವಿಶ್ವಾರಾಧ್ಯಜಗದ್ಗುರುಂ ಭಜತ ಭೋ ! ವಿದ್ಯಾಪ್ರಭುತ್ವಪ್ರದಂ ॥೪॥

ಸಾರಾಸಾರವಿವೇಕದರ್ಶನವಿಧೌ ಸಂಖ್ಯಾವದಧ್ಯಾಪಕಂ ।
ಪ್ರಾರಬ್ಧಾಖಿಲಪಾಪಪುಂಜತುಹಿನ–ಪ್ರಧ್ವಂಸಭಾನೂಪಮಂ ॥
ವೀರಶ್ರೀಸಿವಧರ್ಮರಕ್ಷಣಪಟುಂ ವಿದ್ಯಾರ್ಥಿಚಿಂತಾಮಣಿಂ ।
ವಿಶ್ವಾರಾಧ್ಯಜಗದ್ಗುರುಂ ಭಜತ ಭೋ ! ವಿದ್ಯಾಪ್ರಭುತ್ವಪ್ರದಂ ॥೫॥

ಮುಕ್ತಿಶ್ರೀವನಿತಾವಿಲಾಸನಿಲಯಂ ಮೋಹಾದ್ರಿವಜ್ರಾಯುಧಂ ।
ಭಕ್ತೋದ್ಧಾರಕಥಾಸುಧಾರಸಮಯಂ ಪಾಪಾಟವೀಪಾವಕಂ ॥
ಶಕ್ತಿಪ್ರೋತಶಿವಾದ್ವಿತೀಯಹೃದಯಂ ಶಾಂತಾಭಿಲಾಷೋದಯಂ ।
ವಿಶ್ವಾರಾಧ್ಯಜಗದ್ಗುರುಂ ಭಜತ ಭೋ! ವಿದ್ಯಾಪ್ರಭುತ್ವಪ್ರದಂ ॥೬॥

ಇಚ್ಛಾಮಾತ್ರವಿನಿರ್ಮಿತಾಷ್ಟವಿಭವಂ ಹೇಮಾಸನೋಪಸ್ಥಿತಂ ।
ಸ್ವಚ್ಛಂದಾಚರಣಸ್ವತಂತ್ರನಿಗಮಂ ಸ್ವಚ್ಛಾಂತರಂಗೋಜ್ಜ್ವಲಂ ॥
ಚಿಚ್ಛಕ್ತಿಪ್ರಭುತಾಮಹೇಶ್ವರನಿಭಂ ಶ್ರೀಮದ್ವಿರಕ್ತೇಶ್ವರಂ ।
ವಿಶ್ವಾರಾಧ್ಯಜಗದ್ಗುರುಂ ಭಜತ ಭೋ! ವಿದ್ಯಾಪ್ರಭುತ್ವಪ್ರದಂ ॥೭॥

ಕಾಶೀಜಂಗಮವಾಟಕಾಮಠಮಹಾ-ಕೈಲಾಸಕಲ್ಪದ್ರುಮಂ ।
ವ್ಯಾಸಬ್ರಹ್ಮಗವೀನಿರೂಪಿತಶಿವಂ ವ್ಯಾಸಕ್ತತತ್ತ್ವಕ್ರಮಂ ॥
ಈಶೇಶಾನಮುಖಾಂಬುಜಾತಜನನಂ ಹೇಲಾಜಗತ್ಪಾಲನಂ ।
ವಿಶ್ವಾರಾಧ್ಯಜಗದ್ಗುರುಂ ಭಜತ ಭೋ! ವಿದ್ಯಾಪ್ರಭುತ್ವಪ್ರದಂ ॥೮॥

**ವಿಶ್ವಾರಾಧ್ಯಾಷ್ಟಕಂ ಪುಣ್ಯಂ । ವೀರಭದ್ರಗುರುಸ್ತುತಂ ।**
**ಗುರುಭಕ್ತೋ ಜಪೇನ್ನಿತ್ಯಂ । ಪರಮೈಶ್ವರ್ಯಸಿದ್ಧಯೇ ॥**





ಶಿವೈಕ್ಯರಾದ ಶ್ರೀ ೧೦೦೮ ಜಗದ್ಗುರು
ವೀರಭದ್ರಶಿವಾಚಾರ್ಯಮಹಾಸ್ವಾಮಿಗಳವರು,
ಜಂಗಮವಾಡಿಮಠ, ಶ್ರೀಕ್ಷೇತ್ರ ಕಾಶಿ.

# ಶ್ರೀರೇಣುಕಾಚಾರ್ಯ ಸ್ತೋತ್ರಂ



ನಮೋ ನಮಸ್ತೇ ಶಿವಭಕ್ತಪಕ್ಷ ನಮೋ ನಮಸ್ತೇ ಸುಜನಾಲಿರಕ್ಷ ।
ನಮೋ ನಮಸ್ತೇ ಪರವಾದಿರೂಕ್ಷ ನಮೋ ನಮಸ್ತೇ ವಿಜಿತಾಖಿಲಾಕ್ಷ ॥೧
ನಮೋ ನಮೋ ಮೋಕ್ಷವಿಚಾರದಕ್ಷ ನಮೋ ನಮೋ ವೇದವಿಧಾನಶಿಕ್ಷ ।
ನಮೋ ನಮಃ ಪಾಪಕೃತಾಂ ವಿಪಕ್ಷ ನಮೋ ನಮೋ ರೇವಣ ಕಲ್ಪ-
ವೃಕ್ಷ ॥೨॥

ಭದ್ರಾಂಕುರಾಯ ಭಜತಾಮಭಯಂಕರಾಯ
ಮೋಹಾಂಧಕಾರರವಯೇ ಕವಯೇ ಮನೂನಾಂ ।
ಕೈವಲ್ಯಕಲ್ಪತರವೇ ಗುರವೇ ಗುರೂಣಾಂ
ಶ್ರೀರೇಣುಕಾಯ ಗಣಪಾಯ ನಮೋಽಸ್ತುತುಭ್ಯಂ ॥ ೩॥

ನ ಸೇವೇ ರಮೇಶಂ ನ ಸೇವೇ ಪ್ರಜೇಶಂ
ನ ಸೇವೇ ಸುರೇಶಂ ನ ಸೇವೆ ಗಣೇಶಂ ।
ಮಹೇಶಪ್ರಭಾವಂ ಮಹಾಚಾರ್ಯದೇವಂ
ಮಹೋಬದ್ಧದೇಹಂ ಭವಂತಂ ಭಜೇಹಂ ॥೪॥

ಸಂಸಾರಾಮಯಸದ್ವೈದ್ಯ ಜ್ಞಾನಸಾಗರವರ್ಧನ ।
ಸರ್ವಜ್ಞ ಸಕಲಾಧಾರ ಸರ್ವಾಭೀಷ್ಟಫಲಪ್ರದ ॥೫॥

ಕೇನಚಿತ್ಕಾರಣೇನಾಹಂ ಶಿವವಾಕ್ಯಾನುಸಾರತಃ ।
ಗುರೋ ತ್ವದಂತಿಕಂ ಪ್ರಾಪ್ತಃ ಪ್ರಸೀದ ಕರುಣಾನಿಧೇ॥೬॥

ಇತಿ ಶ್ರೀಶಂಕರಾಚಾರ್ಯಕೃತಂ
ಶ್ರೀಭಗವತ್ಪಾದ ರೇಣುಕಾಚಾರ್ಯಸ್ತೋತ್ರಂ ಸಂಪೂರ್ಣಂ



# ಬಾ ಬಾ ರೇಣುಕ



ಬಾಬಾ ರೇಣುಕ ಗುರುದೇವ
ನಿತ್ಯ ನಿರಂಜನ ಶಿವಭಾವ
ಅಗಸ್ತ್ಯಗೆ ತತ್ತ್ವವ ಬೋಧಿಸಿದೆ
ಷಟ್‌ಸ್ಥಳ ಧರ್ಮವ ಸ್ಥಾಪಿಸಿದೆ
ಮೂರುಕೋಟಿ ಗುರು ರೂಪಗಳಿಂದೆ
ವಿಭೀಷಣ ಬಯಕೆಯ ನೆರವೇರಿಸಿದೆ
ಲಿಂಗದೊಳುದಯಿಸಿ ಲಿಂಗದೆ ಬೆರೆದೆ
ನಿನ್ನೀ ಮೈಮೆಗೆ ನಾ ಬೆರಗಾದೆ
ನಿನ್ನಯ ತತ್ತ್ವವ ತಿಳಿದವರಿಲ್ಲ
ನಿನ್ನಯ ಹಿರಿಮೆಯ ನರಿದವರಿಲ್ಲ
ನೀ ಪೇಳಿದುದನು ಪೇಳುವರಿಲ್ಲ
ಅನ್ನಂಭಟ್ಟರಿಗೆ ಕಡಿಮೆಯೆ ಇಲ್ಲ
ಶರಣರ ತತ್ತ್ವವು ಬೇರೆಯೆ ಅಂತೆ
ನೀ ಹೇಳಿಹುದು ಬೇರಿಹುದಂತೆ
ಮೂಢರ ಮೂರ್ಖರ ಗಜಿಬಿಜಿ ಸಂತೆ
ಬಾರೈ ಬೇಗನೆ ತಡವೇಕಂತೆ
ಗಗನದೆ ಚರಿಸುತೆ ಧರ್ಮವ ನೊರೆಯುತೆ
ಜಗವನು ಪೊರೆಯಲು ಬೇಗನೆ ಬಾ
ಬಾಬಾ ರೇಣುಕ ಗುರುದೇವ

(ಭಾರತೀಯ ಸಿದ್ಧಾಂತ)



# ತ್ಯಾಗಗುಣವಿಲ್ಲದಲೆ ಪಾಪಿಯಾಯ್ತಾಚಾರ

ಕಾಪಾಡು! ಕಾಪಾಡು! ಕಾಪಾಡು! ಮಲ್ಲೇಶ,
ಪಾಪ ಪೂರಿತ ಭವದಿ ಬೆಂದು ಬೆಂಡಾದೆ.
ಪರನಿಂದೆಯನುಕೇಳಿ ಪಾಪಿಯಾಯಿತು ಕಿವಿಯು,
ಪರ ಸಿರಿಯ ಬಯಸಿ ಮನ ಪಾಪಿಯಾಯ್ತು.
ತರವಲ್ಲದುದ ನೋಡಿ ಪಾಪಿಯಾಯಿತು ಕಣ್ಣು,
ಹರಪೂಜೆ ಮಾಡದಲೆ ಕರ ಪಾಪಿಯಾಯ್ತು.
ಶಿವಯಾತ್ರೆ ಮಾಡದಲೆ ಪಾಪಿಯಾಯಿತು ಕಾಲು,
ಭವಿ ಕಥೆಯ ಪೇಳಿ ಬಾಯಿಯು ಪಾಪಿಯಾಯ್ತು.
ಕುವಿಚಾರವನು ಮಾಡಿ ಪಾಪಿಯಾಯಿತು ಮತಿಯು,
ಶಿವ ಎನ್ನದೀ ರಸನೆ ಪಾಪಿಯಾಯ್ತು.
ರಾಗ ದ್ವೇಷದಿ ಮುಳುಗಿ ಪಾಪಿಯಾಯಿತು ತನುವು,
ಯೋಗವನು ತೊರೆದು ಪ್ರಾಣವು ಪಾಪಿಯಾಯ್ತು.
ತ್ಯಾಗಗುಣವಿಲ್ಲದಲೆ ಪಾಪಿಯಾಯ್ತಾಚಾರ,
ವಾಗೀಶ ವರದ! ಶ್ರೀಗಿರಿ ಮಲ್ಲಿನಾಥಾ!!

**ವರಕವಿ, ವಾಗೀಶ.**
(ಧರ್ಮರಾಜ್ಯ)

# ಹಗಲು ಕತ್ತಲೆ ಕೂಡಿಕೊಂಡಂತಿದೆ !

ಯೋಗಿಯೆಂಬೆನೆ ನಿನಗೆ ಭೋಗಿ ಭೂಷಣನಾದೆ,
ವಿಷವಕುಡಿದವನೆನ್ನಲಮೃತನಾದೆ.
ಶಸ್ತ್ರಧರನೆಂಬೆನೇ ವೃದ್ಧ ತಾಪಸಿಯಾದೆ,
ಶಾಂತನೆಂಬೆನೆ ನಿನಗೆ ರುದ್ರನಾದೆ.
ಕಾಮಾರಿಯೆಂಬೆನೇ ಪಾರ್ವತೀಪತಿಯಾದೆ,
ತಿರುಕನೆಂಬೆನೆ ತ್ರಿಭುವನೇಶನಾದೆ.
ಶುದ್ಧ ನೀನೆಂಬೆನೇ ರುಂಡಮಾಲೆಯ ಧರಿಪೆ,
ನಿನ್ನ ರೂಪವದೆಂತೊ ತಿಳಿಯದಾದೆ.
ಎನ್ನಯ್ಯ ಶ್ರೀಗಿರಿಯ ಮಲ್ಲಿಕಾರ್ಜುನದೇವ,
ಹಗಲು ಕತ್ತಲೆ ಕೂಡಿಕೊಂಡಂತಿದೆ.
ಭಕ್ತರಾಗ್ರಹಕಾಗಿ ಲಿಂಗರೂಪವತಾಳಿ,
ಕಂಗಳಿಗೆ ಕಾಣಲ್ಕೆ ಬಂದಂತಿದೆ.

**ವರಕವಿ, ವಾಗೀಶ.**

(ಧರ್ಮರಾಜ್ಯ)



### ತೀರ್ಥ ತೆಗೆದುಕೊಳ್ಳುವ ಕಾಲಕ್ಕೆ ಗುರುಗಳ ಮುಂದೆ ನಿಂತು ಕೆಳಗಿನ ಸ್ತೋತ್ರವನ್ನು ಪಠಿಸಿ ಸಾಷ್ಟಾಂಗ ನಮಸ್ಕಾರ ಹಾಕುವದು

ಹರಹರ ಕಾಲಹರ ಕರ್ಮಹರ ದುರಿತಹರ ಮಹಾಪ್ರಸಾದ ಪೂರ್ವಜನ್ಮ ಕರ್ಮನಿವಾರಣ ದೀಕ್ಷಾಗುರೊ ಶಿಕ್ಷಾಗುರೊ ಮೋಕ್ಷ ಗುರೊ ಗುರೋರ್ಗುರೊ ಪರಮಗುರೊ ಪರಮಾರಾಧ್ಯ ಭೋ ! ಮಹಾ ಸ್ವಾಮಿನ್ ಪ್ರಸೀದ ಭವತಃ ಪಾದಪದ್ಮಯೋಃ ಸಾಷ್ಟಾಂಗ ನಮ ಸ್ಕಾರಂ ಕರೋಮಿ ದೇಹಿ ತೀರ್ಥಸ್ವೀಕಾರಾಯಾನುಜ್ಞಾಂ.

## ದ್ವಾದಶಜ್ಯೋತಿರ್ಲಿಂಗಗಳು

ಶ್ರೀ ಪರಮೇಶ್ವರನು ಜಗತ್ಕಲ್ಯಾಣಾರ್ಥವಾಗಿ ಪವಿತ್ರಕ್ಷೇತ್ರ ಗಳಲ್ಲಿ ಲಿಂಗಾಕೃತಿಯಿಂದ ವಿರಾಜಿಸುತ್ತಲಿರುವನೆಂದು ಶಿವಪುರಾಣಾದಿ ಗಳಲ್ಲಿ ಉಲ್ಲೇಖಿಸಲ್ಪಟ್ಟದೆ. ಅಂತಹ ಪವಿತ್ರ ಕ್ಷೇತ್ರಗಳು ಭರತಖಂಡ ದಲ್ಲಿ ಹನ್ನೆರಡು ಮಾತ್ರ ಇರುವವು.

ಸೌರಾಷ್ಟ್ರೇ ಸೋಮನಾಥಂಚ ಶ್ರೀಶೈಲೇ ಮಲ್ಲಿಕಾರ್ಜುನಂ ।
ಉಜ್ಜಯಿನ್ಯಾಂ ಮಹಾಕಾಲ ಮೋಂಕಾರ ಮಮಲೇಶ್ವರೇ ॥೧॥

ಕೇದಾರಂ ಹಿಮವತ್ಪೃಷ್ಠೇ ಡಾಕಿನ್ಯಾಂ ಭೀಮಶಂಕರಂ ।
ವಾರಾಣಸ್ಯಾಂಚ ವಿಶ್ವೇಶಂ ತ್ರ್ಯಂಬಕಂ ಗೌತಮಿತಟೇ ॥೨॥

ಪರಲ್ಯಾಂ ವೈದ್ಯನಾಥಂಚ ನಾಗೇಶಂ ದಾರುಕಾವನೆ ।
ಸೇತುಬಂಧೇತು ರಾಮೇಶಂ ಘುಸೃಣೇಶಂ ಶಿವಾಲಯೆ ॥೩॥

ದ್ವಾದಶೈತಾಸಿ ನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ।
ಸಪ್ತಜನ್ಮಕೃತಂಪಾಪಂ ಸ್ಮರಣೇನ ವಿನಶ್ಯತಿ ॥೪॥

ಏತೇಷಾಂ ದರ್ಶನಾದೇವ ಪಾತಕಂ ನೈವ ತಿಷ್ಠತಿ ।
ಕರ್ಮಕ್ಷಯೋ ಭವೇತ್ತಸ್ಯ ಯಸ್ಯ ತುಷ್ಟೋ ಮಹೇಶ್ವರಃ ॥೫॥

# ಈಶ್ವರೇಚ್ಛೆ



ಆರ ಕೈಯೊಳಗಿಲ್ಲವಾರ ಕಜ್ಜದೊಳಿಲ್ಲ,
ಮಾರುವುದು ಈಶ್ವರೇಚ್ಛೆಯನೆಂದಿಗೂ ;
ವೀರಭೂಪಾಲರೂ, ಧೀರ ಮುನಿವರ್ಯರೂ
ಘೋರ ಕಷ್ಟವನುಂಡುದೀಶ್ವರೇಚ್ಛೆ.

ಬಡವ ಬಲ್ಲಿದನಹನು, ಬಲ್ಲಿದನು ಬಡವನಹ ;
ಸುಡುಗಾಡು ಅರಮನೆಯ ತಾಣವಹುದು !
ಬೆಡಗಿನರಮನೆ ಚಣದಿ ಸುಡುಗಾಡೆ ಆಗುವುದು,
ಮಡುವು ನೆಲವಾಗುವುದು ಈಶ್ವರೇಚ್ಛೆ.

ಮನುಜನಾವಾಗಲೂ ಉನ್ನತಿಯ ಬಯಸುವನು,
ಘನಕಾರ್ಯಗಳ ಮಾಡಲೆತ್ನಿಸುವನು ;
ಮನದಿಚ್ಛೆ ಪೂರಯಿಸಬೇಕೆಂದು ಬಳಲುವನು,
ಕೊನೆಗದಕೆ ಫಲಮುಪ್ಪುದೀಶ್ವರೇಚ್ಛೆ.

ದೇವಾಂಶ ಸಂಭವರು ಶೂರರಾ ಪಾಂಡವರು,
ದೇವಾವತಾರಿಯಾ ರಾಮಚಂದ್ರ ;
ಜೀವ ಪರಮಾತ್ಮ ತತ್ವಾನುಭವಿಯಾ ಕೃಷ್ಣ
ರಾವಪರಿ ಬಳಲಿದರು ಈಶ್ವರೇಚ್ಛೆ.

ನರರದನು ಅರಿದರಿದು ಮರೆದು ಮರುಳಾಗುವರು,
ಸುರಮುನಿಗಳಾದರೂ ಬಳಲುತಿಹರು ;
ಬರುವ ಸುಖದುಃಖವನು ಮಲ್ಲಿಕಾರ್ಜುನನಿತ್ತ
ವರವೆಂದು ಸೇವಿಪುದೆ ಈಶ್ವರೇಚ್ಛೆ.

**ವರಕವಿ ಶ್ರೀವಾಗೀಶ**

(ಧರ್ಮರಾಜ್ಯ)

## ಲಿಂಗವನಗಲಿರಬೇಡ

ಲಿಂಗವನಗಲಿರಬೇಡೆಲೊಪ್ರಾಣ । ಲಿಂಗವನಗಲಿರಬೇಡೆಲೊ॥ಪಲ್ಲ॥ ಪಟುರೋಗಾದಿಗಳ ಸಂಕಟ ಚೋರಭಯವ್ಯಾಳ್ಯಾ । ಘಟದೊಳ ಹೊರಗಿಹ ಸ್ಫುಟಲಿಂಗವನಗಲಿರ ॥೧॥ ಕುಚಿತಮಾನಸದಿ ಗುರುವಚನ ವರಿಯದೆ ಮತ್ತೆ । ಶುಚಿಯಾಶುಚಿಯ ಶಂಕದ ಚಲಿಸವಾಗಿಹ ಪ್ರಾಣ ॥೨॥ ಸ್ತುತಿನಿಂದೆಗಳಿಗೆ ನೀನತಿಮೋಹಿಸಿಯು ತತ್ವ । ಮತಿಗೆಟ್ಟು ಘನ ಮಠ । ಪತಿ ಲಿಂಗವನಗಲಿರಬೇಡೆಲೊ ॥೩॥

## ಮಂಗಲಂ

ಜಯ ಜಯ ವಿಶ್ವಾರಾಧ್ಯ ಸುಗುರೊ ।
ಜಯ ಜಯ ಭಕ್ತಾವಲಿ ವಿಬುಧತರೊ ॥ಜಯ॥

ಅತುಲಿತ ಮಹಿಮಾ ಶ್ರಿತಯತಿಸೋಮ ।
ಹತವಿಕಟಯಮಾ ದೃತಯಮನಿಯಮ ॥೧॥

ಗುರುಚಕ್ರೇಶ್ವರ ಪರಮುದಯಾಕರ ।
ದುರಿತನಿಚಯಹರ ಹರಮತಧೀರ ॥೨॥

ಜ್ಞಾನಪೀಠಘನ ದೀನಾವನಧನ ।
ಆನತಭುವನೇ ಶಾನಸಮಾನ ॥೩॥

ಶರಭವಗೋತ್ರ ಹರಭವಗಾತ್ರ ।
ಪರಮಪವಿತ್ರ ಗುರುನುತಿಪಾತ್ರ ॥೪॥

ವೀರಶೈವನರ ವಾರಿಧಿಹಿಮಕರ ।
ವೀರಭದ್ರಗುರು ಸಾರಸಮಿಹಿರ .... ॥೫॥

ಓಂ ಶಾಂತಿ ! ಶಾಂತಿ !! ಶಾಂತಿ !!!



ಶಿವೈಕ್ಯರಾದ ಷ|| ಬ್ರ|| ಶ್ರೀ|| ಗುರುಶಿದ್ಧಲಿಂಗಶಿವಾಚಾರ್ಯ
ಸ್ವಾಮಿಗಳವರು ಬೃಹನ್ಮಠ ಕೊಣ್ಣೂರು

## ಈ ಗ್ರಂಥಕ್ಕೆ ಉದಾರಹಸ್ತದಿಂದ ಸಹಾಯ ನೀಡಿದ ಮಹನೀಯರು

---

### ೨೫ ರೂ.ಗಳ ದಾತೃಗಳು

ಶ್ರೀಮಾನ್ ಜಿ. ಜಿ. ದೇಸಾಯರು (ಸಂಕನೂರು) ಮು. ಕೊಣ್ಣೂರು (ವಾಗ್ದಾನ)

### ೧೦ ರೂ.ಗಳ ದಾತೃಗಳು

ಶ್ರೀಮಾನ್ ಎಲ್. ಬಿ. ಕುಲಕರ್ಣಿ ಚಿಕ್ಕನರಗುಂದ (ವಾಗ್ದಾನ)

,, ಫ. ಪ. ಪಾಟೀಲ ಕೊಣ್ಣೂರು (ವಾಗ್ದಾನ)

### ೫ ರೂ.ಗಳ ದಾತೃಗಳು

,, ಸಿದ್ದಯ್ಯಾ ಚನಬಸಯ್ಯಾ ವಸ್ತ್ರದ ಸೂಡಿ

,, ಗುರುಸಿದ್ದಯ್ಯಾ ಬಸವಣ್ಣೆಯ್ಯಾ ನರೇಂದ್ರಮಠ ಹುಬ್ಬಳ್ಳಿ (ವಾಗ್ದಾನ)

,, ಸಿದ್ಧಲಿಂಗಯ್ಯಾ ಚರಂತಯ್ಯ ಹಿರೇಮಠ ಬೆನಕೊಪ್ಪ

,, ಕರಬಸಪ್ಪ, ಫಕೀರಪ್ಪ ಬರದೆಲಿ ಇಡಗಲ್ (ವಾಗ್ದಾನ)

,, ಶಂಬಯ್ಯಾ, ವೀರಯ್ಯಾ ಹಿರೇಮಠ ಅ|| ಮಾಸ್ತರರು ಚಿಕ್ಕನರಗುಂದ (ವಾಗ್ದಾನ)

,, ಸಿದ್ದಪ್ಪ, ಶಿದ್ಲಿಂಗಪ್ಪ ಗವಿ ಚಿಕ್ಕನರಗುಂದ (ವಾಗ್ದಾನ)

,, ಚನಬಸಪ್ಪ ಅಯ್ಯಪ್ಪ ಹೆಬ್ಬಾಳ ,,

,, ದರಿಯಪ್ಪ ಫಕೀರಪ್ಪ ಹಾದೀಮನಿ ,,

,, ಮಲ್ಲಪ್ಪ ಪರಪ್ಪ ತೊರಗಲ್ ,, (ವಾಗ್ದಾನ)

ಶ್ರೀಮಾನ್ ರಾಯರಡ್ಡಿ ಭೀಮರಡ್ಡಿ ತಿಮರಡ್ಡಿಯವರ ಚಿಕ್ಕನರಗುಂದ (ವಾಗ್ದಾನ)

ವೇ|| ಶ್ರೀ|| ಅಡವಯ್ಯನವರು ಕಲ್ಮಠ ಅಸೂಟಿ (ಮು. ಹೊಳೆಆಲೂರ) (ವಾಗ್ದಾನ)

ಸೂಚನೆ:—ಈ ಗ್ರಂಥ ಮುದ್ರಣಕ್ಕಾಗಿ ವಾಗ್ದಾನ ಮಾಡಿದವರು ಶೀಘ್ರವಾಗಿ ತಮ್ಮ ಸಹಾಯ ಧನವನ್ನು ಷ|| ಬ್ರ|| ಶ್ರೀ ಪಟ್ಟದ ಸ್ವಾಮಿಗಳು ಹಿರೇಮಠ ಮು. ಪೋ. ಕೊಣ್ಣೂರು ವ್ಹಾಯ ನರಗುಂದ ಜಿಲ್ಲಾ-ಧಾರವಾಡ ಈ ಅಡ್ರೆಸ್ಸಿಗೆ ತಪ್ಪದೆ ಕಳುಹಿಸಿ ಶ್ರೀಗುರು ಕೃಪೆಗೆ ಪಾತ್ರರಾಗಬೇಕೆಂದು ಇಚ್ಛಿಸುತ್ತೇವೆ.

|| ಇತಿ ಶಿವಂ ||

